

ಈ ತಿಂಗಳ ಮಂಗಳಮೂರ್ತಿ ಡಾ|| ಡಿ. ಸಿ. ಪಾವಟೆ ಪಂಜಾಬಿನ ರಾಜ್ಯಪಾಲರಾಗಿದ್ದಾಗ



# ಕಲ್ಯಾಣ ಕಿರಣ

**ದೇವನಡಿಗೆ** **ನುಡಿ-ನೈವೇದ್ಯ**

ಮನದ ಮಂದಿರ ಬೆಳಗ್ವ ಚಂದಿರ ದೇವ ನೀನು ಸುಂದರ
ಭವದ ಬನ್ನವ ಮುದದಿ ತೊಡೆಯುವ ನಿನ್ನ ಕರುಣೆಯು ಬಂಧುರ ||ಪ||

ಜನುಮ ಜನುಮಾಂತರದ ಪುಣ್ಯವು ಕೂಡಿ ಬಂದಿತು ಈ ದಿನ
ಚೆನ್ನ ಚಲುವನೆ ನಿನ್ನ ಹೃದಯಕೆ ಮಾರು ಹೋಯಿತು ಎನ್ಮನ ||
ತಾಯಿತಂದೆ ಬಂಧು ಬಳಗದ ಮೋಹ ಪಾಶವು ಹರಿಯಿತು
ಸಾವು ಬದುಕಿನ ಭವದ ಸರವಿಯು ವಿರತಿ ನೇತ್ರದಿ ದಹಿಸಿತು ||೧||

ಅರಿವು ನೀಡುವ ಗುರುವು ದೊರೆಯಲು ಮತಿಯ ಪಾತ್ರೆಯು ತುಂಬಿತು
ಕರುಣೆಯಿರಿಸಿ ಮಂತ್ರ ಉಸುರಲು ಹೊಸತು ಜನ್ಮವು ಬಂದಿತು ||
ಪ್ರಭುವೆ ನಿನ್ನಯ ಪಾದ ಕಮಲಕೆ ದುಂಬಿಯಾಗಿಸಿ ಎನ್ನನು
ಸುಭಗ ಬದುಕಿನ ಹೊನ್ನ ನೀರನು ಸದ್ಗುರುವು ಎನಗೆರೆದನು ||೨||

ನಿನ್ನ ಭಸಿತವು ಎನಗೆ ಸಿಂಧೂರ ದೇವ ವಧುವಿಗೆ ಲೇಪವು
ಚೆನ್ನ ಶಿವಮಣಿ ಹರನ ಕನ್ಯೆಗೆ ನವ್ಯ ಕಂಕಣ ಕಡಗವು
ಮುಗಿಲ ಹಂದರದಲ್ಲಿ ಮಿನುಗುವ ಚುಕ್ಕಿ ತೂಗುವ ದೀಪವು
ಸೊಗದಿ ಉದಯಿಪ ಕೆಂಪು ಕದಿರನ ಮೊಗವು ಓಕುಳಿಯಾರತಿ ||೩||

ಭಕ್ತಿ-ಜ್ಞಾನ-ವಿರಕ್ತಿಯೆಂಬ ಚೆಂದ ಚೆಂದದ ಉಡುಗೆಯು
ಶಾಂತಿ ಸೈರಣೆ ಕರುಣೆ ಸಮತೆ ಸಜ್ಜನತ್ವದ ಕೊಡಿಗೆಯು ||
ಕರುಣ ಸಿಂಧುವೆ ದೀನ ಬಂಧುವೆ ಭಜಕ ರಕ್ಷಕ ಪರಮನೇ
ಮರಣ-ಜನನದ ಬನ್ನ ತೊಡೆಯುವ ಸಚ್ಚಿದಾನಂದ ಚಿತ್ಪ್ರಭು ||೪||

# ಕಲ್ಯಾಣ  ಕಿರಣ

ಸಂಪುಟ : ೩ | ಫೆಬ್ರವರಿ : ೧೯೭೮
ಸಂಚಿಕೆ : ೧೦ | ಬಸವ ಶಕೆ : ೮೭೧

## ಪುಟ ತೆರೆದಾಗ



ಮುಖ ಪುಟ : ಶಿಸ್ತಿನ ಶೂರ ಶಿವಪ್ಪನಾಯಕ

ಹಿಂಬದಿಯ ಹೊದಿಕೆ : ಲಂಡನ್ನಿನಲ್ಲಿರುವ ಬ್ರಿಟಿಷ್ ಮ್ಯೂಸಿಯಂ


## ಕಲ್ಯಾಣ ಕಿರಣ

### ಮಾಸಪತ್ರಿಕೆ

ಸಂಸ್ಕೃತಿ, ಸಾಹಿತ್ಯ, ನೀತಿ ಅಧ್ಯಾತ್ಮ ಮೌಲ್ಯಗಳ ಪ್ರಸಾರಕ್ಕೆ ಮೀಸಲಾದ ಪತ್ರಿಕೆ

**ಪ್ರಧಾನ ಸಂಪಾದಕರು :**

ಪೂಜ್ಯ ಶ್ರೀ
ಜಗದ್ಗುರು ಮಾತೆ ಮಹಾದೇವಿ.

* * *

**ಪ್ರಕಾಶಕರು :**

ಜಗನ್ಮಾತಾ ಅಕ್ಕಮಹಾದೇವಿ ಆಶ್ರಮದ ಪರವಾಗಿ ವಿಶ್ವಕಲ್ಯಾಣ ಮಿಷನ್ ಸಂಸ್ಥೆಯು ಪ್ರಕಾಶನ ಪಡಿಸುವುದು:

**ಕೇಂದ್ರ ಕಾರ್ಯಾಲಯ :**

ಕಲ್ಯಾಣ ಕಿರಣ ಮಾಸಪತ್ರಿಕೆ
ಬಸವ ಮಂಟಪ, ನಂ. ೨೪, ಎರಡನೇ ವಿಭಾಗ, ಕಾರ್ಡ್‌ರೋಡ್ ರಾಜಾಜಿನಗರ.
ಬೆಂಗಳೂರು—೫೬೦೦೧೦

**ಕಲೆ :**

ಬಿ. ಪಿ. ಕೃಷ್ಣಯ್ಯ

**ಮುದ್ರಣ : ಸೂಪರ್ ಪ್ರಿಂಟರ್ಸ್,**
ಬೆಂಗಳೂರು—೫೬೦೦೫೩.


### ಚಂದಾ ವಿವರ

| | | |
|---|---|---|
| ಬಿಡಿ ಸಂಚಿಕೆ : | ರೂ. | ೧-೦೦ |
| ವಾರ್ಷಿಕ : | ರೂ. | ೧೨-೦೦ |
| ದ್ವೈವಾರ್ಷಿಕ : | ರೂ. | ೩೩-೦೦ |
| ಆಜೀವ ಸದಸ್ಯತ್ವ : | ರೂ. | ೧೫೧-೦೦ |
| ಪೋಷಕರು : | ರೂ. | ೫೦೧-೦೦ |
| ಮಹಾಪೋಷಕರು : | ರೂ. | ೧೦೦೧-೦೦ |

* ಪತ್ರಿಕೆಯು ಪ್ರತಿ ತಿಂಗಳ ದಿನಾಂಕ ಒಂದರಂದು ಪ್ರಕಟವಾಗುವುದು.
* ಲೇಖಕರು ಲೇಖನಗಳನ್ನು ೧೦ನೇ ದಿನಾಂಕದೊಳಗೆ ಕಳಿಸಬೇಕು:
* ಪತ್ರಿಕೆಯ ಉದ್ದೇಶವಾದ ಧಾರ್ಮಿಕ, ಸಾಂಸ್ಕೃತಿಕ ಎಲ್ಲಾ ಬಗೆಯ ತಾತ್ವಿಕ ವಿಚಾರಗಳ ಲೇಖನ, ಕಥೆ, ಕವನಗಳಿಗೆ ಸ್ವಾಗತವಿದೆ.
* ಲೇಖನಗಳನ್ನು ಕಾಗದದ ಒಂದು ಮಗ್ಗುಲಿಗೆ ಸ್ಫುಟವಾಗಿ ಬರೆದಿರಬೇಕು.
* ಲೇಖಕರು ತಮ್ಮ ಹೆಸರು ವಿಳಾಸ ಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಅಥವಾ ಸಾಧಾರ ಲೇಖನಗಳಾದರೆ ಅದನ್ನು ಸ್ಪಷ್ಟವಾಗಿ ತಿಳಿಸಿ, ಮೂಲ ಲೇಖಕರ ಮತ್ತು ಪ್ರಕಾಶಕರ ಹೆಸರನ್ನು ಕಾಣಿಸ ಬೇಕು.
* ಅಸ್ವೀಕೃತ ಲೇಖನ ಬೇಕಾಗಿದ್ದಲ್ಲಿ ಮರಳಿಸಲು ಬೇಕಾದ ಅಂಚೆವೆಚ್ಚಕ್ಕೆ ಅವಶ್ಯಕವಿರುವ ಸ್ಟಾಂಪುಗಳನ್ನೂ ಕಳಿ ಸಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.
* ಚಂದಾ ಹಣ ಕೊಡದೆ ಇದ್ದವರು ಪತ್ರಿಕೆಯು ತಲುಪಿದ ತಕ್ಷಣ ಕಳಿಸಬೇಕು.
* ಹೊಸ ಚಂದಾದಾರರು ೧೨-೦೦ (ಹನ್ನೆರಡು ರೂಪಾಯಿ) ಎಂ. ಓ. ಮಾಡಬೇಕು. (ವಿ. ಪಿ. ಇಲ್ಲ).
* ಚಂದಾದಾರರು ಪತ್ರ ವ್ಯವಹಾರಗಳಲ್ಲಿ ವಿಳಾಸದ ಮೊದಲಲ್ಲಿ ಬರೆದ ಚಂದಾ ಸಂಖ್ಯೆಯನ್ನು ನಮೂದಿಸಬೇಕು.
* ವಿಳಾಸ ಬದಲಾವಣೆಗಳನ್ನು ತಿಳಿಸ ಬೇಕು. ಚಂದಾದಾರರಾದ ತಿಂಗಳಿಂದ ಮರುವರ್ಷದ ಆ ತಿಂಗಳವರೆಗೆ ಪತ್ರಿಕೆ ಗಳನ್ನು ಕಳಿಸಲಾಗುವುದು.

# ನಿಮ್ಮ ಅನಿಸಿಕೆ



"ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್ ಸತ್ಯಮಪ್ರಿಯಂ ನ ಬ್ರೂಯಾತ್" ಇದು ಸುಪ್ರಸಿದ್ಧ ಋಷಿವಾಣಿ. "ಸತ್ಯವನ್ನು ಹೇಳು, ಪ್ರಿಯ (ಒಳಿತು–ಕಲ್ಯಾಣ) ವಾದುದನ್ನು ಹೇಳು ; ಕೆಡುಕಾಗುವ ಸತ್ಯವನ್ನು ಹೇಳಬೇಡ ಎಂಬುದು ಸಂಸ್ಕೃತದ ಉಕ್ತಿ. ಅದನ್ನು ಮಾತಾಜಿಯವರು ಸರಳ ಕನ್ನಡದಲ್ಲಿ ಕಲ್ಯಾಣ ಕಿರಣದಲ್ಲಿ ನಿರೂಪಿಸಿದಾಗ ಅದನ್ನು ಓದಿದ ವಾಚಕರೊಬ್ಬರಿಗೆ ಸಂಶಯ ಬಂದು, ಅವರು ನೂರಾರು ಜನರನ್ನು ಅರ್ಥ ಕೇಳಿದಾಗ, ಅವರಲ್ಲಿ ಬಹುಪಾಲು ಜನ 'ಕಲ್ಯಾಣ' ಎಂದರೆ 'ಮದುವೆ' ಎಂಬ ಅರ್ಥತಾಳಿ, 'ಸತ್ಯಕ್ಕಿಂತ ಕಲ್ಯಾಣ ಶ್ರೇಷ್ಠ' ಎಂಬ ಮಾತನ್ನು ಟೀಕಿಸಿದ ವಿಷಯವು ಡಿಸೆಂಬರ್ ಕಲ್ಯಾಣ ಕಿರಣದಲ್ಲಿ ಪ್ರಕಟಗೊಂಡಿದೆ. ಸುಸಂಸ್ಕೃತರಾದ ಭಾರತೀಯರು ಪರಂಪರಾಗತ ಪರಮ ಸತ್ಯವೊಂದರ ಅರ್ಥವನ್ನು ಹೀಗೆ ತಪ್ಪು ತಿಳಿದುದು ವಿಷಾದಕರ. ಎಲ್ಲ ಸಾಧನಗಳನ್ನು ಬಳಸಿ ಕಲ್ಯಾಣ (welfare) ಸಾಧನೆ ಮಾಡಬೇಕಾದುದು ಅವಶ್ಯಕವಾದ ಕಾರಣ, ಸತ್ಯವೂ ಒಂದು ಪ್ರಮುಖ ಸಾಧನ. ಈ ಟೀಕಾಕಾರರಿಗೆ ಮಾತಾಜಿಯವರ ಸಮಾಧಾನ ಬಹಳ ಸಮರ್ಪಕವಾಗಿ ಬಂದಿದೆ. ಮಾತೃಹರಕೆಯಲ್ಲಿ.

**ಸುರೇಶ್ ಜೈನ್**, ಗುಡಿಬಂಡೆ.

ಕಲ್ಯಾಣ ಕಿರಣದ ಅತ್ಯಂತ ಆಸಕ್ತಿ ಕಾರಕ ವಿಭಾಗವೆಂದರೆ ಸಮಸ್ಯೆ–ಸಮಾಧಾನ. ಪ್ರಶ್ನೋತ್ತರ ವಿಭಾಗಗಳನ್ನು ಅನೇಕ ಪತ್ರಿಕೆಗಳಲ್ಲಿ ನೋಡಿರುವೆ. ಅಲ್ಲಿ, ಸಾಮಾನ್ಯ ಮಟ್ಟದ ಹುಡುಗ-ಹುಡುಗಿ-ಪ್ರಣಯ, ಇದೇ ಪ್ರಶ್ನೋತ್ತರಗಳೆ ! ಇನ್ನು ಕೆಲವರು ಪ್ರಶ್ನೆ ಕೇಳಿದರೆ ಹಾರಿಕೆಯ ಉತ್ತರಕೊಟ್ಟು ನಗಿಸುವ ಪ್ರಯತ್ನವೇ ವಿನಾ ಸಮಾಧಾನ ನೀಡುವ ಪ್ರಾಮಾಣಿಕತೆ ಇಲ್ಲ. ಕಲ್ಯಾಣ ಕಿರಣದಲ್ಲಿ ನಮ್ಮ ಸಮಸ್ಯೆಗಳಿಗೆ ಸಂಪೂರ್ಣ ಉತ್ತರ ಸಿಗುವುದು ನಮ್ಮ ಪುಣ್ಯವಿಶೇಷ.

**ಎಸ್. ಎಸ್. ಮಹಾಗಾಂವ.**
ಹುಬ್ಬಳ್ಳಿ.






## ಮಠ-ಪೀಠ, ಸಂಘ-ಸಂಸ್ಥೆಗಳ ಶಿಥಿಲತೆಗೆ ಕಾರಣಗಳು

ಲಕ್ಷಾವಧಿ ರೂಪಾಯಿಯ ಆದಾಯ–ಸಂಪತ್ತು ಇರುವ ಅನೇಕ ಮಠ–ಮಾನ್ಯ, ಗುಡಿ-ಗುಂಡಾರ, ಸಂಘ–ಸಂಸ್ಥೆಗಳು ನಮ್ಮ ನಾಡಿನಲ್ಲಿ ಹೇರಳವಾಗಿರುವವು. ಯಾವುದೋ ಒಂದು ಕಾಲದಲ್ಲಿ ಭಕ್ತರಿಂದ ಭೂಮಿ, ಕನಕ, ಧನ ಇತ್ಯಾದಿಗಳ ದೇಣಿಗೆಯನ್ನುಪಡೆದು, ಅಂದು ವಿಜೃಂಭಿಸಿ, ಅಸಂಖ್ಯಾತರನ್ನು ಆಕರ್ಷಿಸಿ ಜೀವಂತಿಕೆಯಿಂದ ಪುಟಿಯುತ್ತಿದ್ದ ಕೆಲವು, ಇಂದು ಸುಣ್ಣ-ಬಣ್ಣ ಸಹ ಕಾಣದೆ ಮಂಕಾಗಿ ಇರುವುದನ್ನು ಕಾಣುತ್ತೇವೆ. ಮಾತ್ರವಲ್ಲ ಇನ್ನು ಕೆಲವು, ಜೀವಂತವಿದೆ ಎಂಬ ಭ್ರಮೆ ಹುಟ್ಟಿಸುವಂತೆ ಏನೇನೋ ಕಾರ್ಯಕ್ರಮಗಳನ್ನು ಮಾಡುತ್ತಿದ್ದರೂ, ಕೇವಲ ವ್ಯಾಪಾರಿ ಮನೋವೃತ್ತಿಯ ಸಂಸ್ಥೆಗಳಾಗಿ ಯಾವುದೇ ಉನ್ನತ ಗುರಿಯೂ ಇಲ್ಲದೆ ಹಣಗಳಿಸುವ ಒಂದೇ ಉದ್ದೇಶ ಹೊತ್ತಿರುವವು. ಅನೇಕ ಜನ ತ್ಯಾಗಿಗಳು-ದಾನಿಗಳು, ವಿರಕ್ತರು ಯಾವ ಒಂದು ಉತ್ತಮ ಧ್ಯೇಯದಿಂದ ಸಂಸ್ಥೆಯನ್ನು ಸ್ಥಾಪಿಸುವರೋ ಅದಕ್ಕೆ ತದ್ವಿರುದ್ಧವಾದ ದಾರಿಯಲ್ಲಿ ಸಾಗುವ ತತ್ತ್ವವಿರೋಧಿ ಶಕ್ತಿಗಳೇ ಸಮಾವೇಶವಾಗುವವು.

ಒಂದು ಊರಲ್ಲಿ ವಿರಕ್ತ ಮಠಾಧೀಶರೋರ್ವರು ತಮ್ಮ ಸಮಾಜದ ವಿದ್ಯಾರ್ಥಿಗಳಿಗಾಗಿ, ಜನರಿಂದ ಹಣವನ್ನೆತ್ತಿ ಬಡವಿದ್ಯಾರ್ಥಿಗಳನ್ನೇ ಮುಖ್ಯ ಉದ್ದೇಶವಾಗಿ ಇರಿಸಿಕೊಂಡು ವಿದ್ಯಾರ್ಥಿನಿಲಯವನ್ನು ಸ್ಥಾಪಿಸಿ ಕಣ್ಮರೆಯಾದರು, ನಿಸರ್ಗ ನಿಯಮದಂತೆ. ಕಾಲ ಕಳೆದಂತೆ ಸಂಪತ್ತು ಅಧಿಕವಾಯಿತು. ಆಗ ಗೆದ್ದಿಲು ಮನೆ ಕಟ್ಟಿದಲ್ಲಿ ಹಾವು ಬಂದು ಸೇರಿಕೊಳ್ಳುವಂತೆ ಹಣದಾಸೆಗಾಗಿ ಬಂದು ಸೇರಿದವು ವಿವಿಧ ಶಕ್ತಿಗಳು. ಇಂದು ಆ ಸಂಸ್ಥೆಯನ್ನು ನೋಡಿದರೆ ವಿಷಾದವೆನಿಸುತ್ತದೆ. ಕುಳಿತರೂ ನಿಂತರೂ 'ಬಸವಾ' ಎನ್ನುವ ವಿರಕ್ತ ಸ್ವಾಮಿಗಳ ಪ್ರಯತ್ನದ ಫಲವಾಗಿ ಬೆಳೆದ ಸಂಸ್ಥೆಯಲ್ಲಿ 'ಬಸವ' ಶಬ್ದ ಕೇಳಿದರೆ

ಕಿಡಿಕಾರುವ, ಕಿವಿ ತೊಳೆಯುವ ಮಹೋದಯರ ಆಡಳಿತ. ಬಡವಿದ್ಯಾರ್ಥಿಗಳಿಗಾಗಿ ಕಟ್ಟಿದ ನಿಲಯದಲ್ಲಿ ಲಂಚಾವತಾರ ಸಾಕ್ಷಾತ್ಕಾರದೊಡನೆ, ಸಿರಿಕುವರರಿಗೇ ವಿಶೇಷ ಅವಕಾಶ.

ಮಠಗಳಾದರೂ ಅಷ್ಟೇ. ಮೂಲ ಸ್ಥಾಪಕರ ಅತುಳ ಆತ್ಮಬಲ, ಸ್ವತಂತ್ರ ವ್ಯಕ್ತಿತ್ವ, ನಿರ್ಭೀತ ಬದುಕಿನ ಫಲವಾಗಿ ಸುಂದರವಾಗಿ ಮೈದಾಳಿ ಬೆಳೆಯುವವು. ಕೆಲವೊಮ್ಮೆ ಅವರ ಸಮಕಾಲೀನರು, ಅವರ ಕೈಕೆಳಗೆ ನುರಿತು ತಯಾರಾದ ಮಠಾಧಿಕಾರಿಗಳು ಸ್ವಲ್ಪಮಟ್ಟಿಗೆ ಮೂಲಸ್ಥಾಪಕರ ತ್ಯಾಗವನ್ನರಿತಿರುವ ಕಾರಣ ಮಠದ ಪರಂಪರೆ ಮುಂದುವರಿಸಬಹುದು. ಸ್ವಲ್ಪಕಾಲ ಸರಿದ ನಂತರ ಪ್ರತಿಭಾವಂತರು ಮಠಕ್ಕೆ ಅಧಿಕಾರಿಗಳಾಗಿ ದೊರೆಯದಾದಾಗ, ಕೈಗೆ ಸಿಕ್ಕವರನ್ನೇ ಅಧಿಕಾರಿಯನ್ನಾಗಿ ಮಾಡಿದಾಗ ಅಥವಾ ರಕ್ತಸಂಬಂಧಿಗಳಲ್ಲಿಯೇ ಮೋಹಗೊಂಡು ಅಧಿಕಾರಕ್ಕೆ ಆರಿಸಿದಾಗ ಪರಂಪರೆ ಶಿಥಿಲವಾಗ ತೊಡಗುತ್ತದೆ. ಕೆಲವೊಮ್ಮೆ ಮಠಗಳ ಮಹಾಭಕ್ತ(ಭುಕ್ತ)ರು ತಮ್ಮ ಪಟ್ಟಭದ್ರ ಆಕಾಂಕ್ಷೆಗಳು ಪೂರ್ಣಗೊಳ್ಳಲು ಬೇಕಾದ ಅಧಿಕಾರಿಗಾಗಿ ನೆಲಮುಗಿಲನ್ನೊಂದು ಮಾಡುತ್ತಾರೆ. ಸ್ವಲ್ಪ ದಿಟ್ಟ ಪ್ರವೃತ್ತಿಯ ಪ್ರತಿಭಾವಂತನೇನಾದರೂ ಬಂದರೆ ಈ ಸಮಿತಿಯವರ ದೃಷ್ಟಿಯಲ್ಲಿ ಅವನು ಅಯೋಗ್ಯ ಇವರ ಆಟಗಳಿಗೆ ಕೋಲೆತ್ತಿನಂತೆ ತಲೆ ಹಾಕದ ಕಾರಣ ವರ್ಜ್ಯ. ಹೀಗಾಗಿ ಜ್ಞಾನಿಗಳಾದ ಗುರುಗಳೊರ್ವರು ಲಿಂಗೈಕ್ಯರಾಗುವ ಗಳಿಗೆಯಲ್ಲಿ ತಮಗಿಚ್ಛೆ ಬಂದ ವಟುವನ್ನು ಆರಿಸಿ, ಆಶೀರ್ವದಿಸಿ ಹೋದಾಗ, ಈ ಸಮಿತಿಯವರು ಒಪ್ಪದೆ ಕೊಡಬಾರದ ಕಿರುಕುಳಕೊಟ್ಟು, ಊಟದಲ್ಲಿ ಗಾಜಿನ ಚೂರುಗಳನ್ನು ಬೆರೆಸಿಕೊಟ್ಟು, ಅಂತೂ ಆ ವ್ಯಕ್ತಿಯು "ಸ್ವಯಂ ಇಚ್ಛೆ"(?)ಯಿಂದ ಮಠತ್ಯಾಗ ಮಾಡುವ ವಾತಾವರಣ ಕಲ್ಪಿಸಿದರು. ಇಂಥ ಕೆಲವರಂತೂ ಹಸಿದ ರಣಹದ್ದುಗಳಂತೆ ಆಸ್ತಿಯ ತುಣುಕಿನ ಸುತ್ತ ಓಡಾಡುವರು. ಇಂಥಾ ಧೂರ್ತತನಕ್ಕೆ ಬಲಿಯಾಗದ ಮಠಾಧಿಕಾರಿಯಿದ್ದರೆ ಅವನ ಸುತ್ತಲೂ ಹೆಣೆಯುವ ಕಥಾಸರಣಿ ಏನು ? ಹಬ್ಬಿಸುವ ಕುಹಕ ಕಥೆಗಳೇನು ? ಮಾಡುವ ಅಪಪ್ರಚಾರವೆಷ್ಟು ? ಇಷ್ಟೆಲ್ಲ ಕಾಟಕ್ಕೆ ಬೇಸತ್ತು ಎಂಥಾ ಎಂಟೆದೆಯವನಾದರೂ ಅಧಿಕಾರಕ್ಕೆ ತಿಲಾಂಜಲಿ ಕೊಡದಿರಲು ಸಾಧ್ಯವೆ ?

ಭಕ್ತಿಯ ಮುಖವಾಡ ಹೊದ್ದು ವ್ಯಾಪಾರ, ವ್ಯವಹಾರ, ರಾಜಕೀಯ, ಚುನಾವಣೆ ಇತ್ಯಾದಿಗಳಿಗೆ ಹಣ ಕೇಳಿ, ಹೆದರಿ ಕೊಡದಿದ್ದವನ ವಿರುದ್ಧ ಚಕ್ರವ್ಯೂಹವನ್ನೇ ರಚಿಸುವ ಪ್ರಚಂಡರು ಕೆಲವರಿರುವರು. ಸನ್ಯಾಸಿಗಳು ಹೆದರಬಹುದಾದ ಒಂದೇ ಅಸ್ತ್ರ ಅಪಪ್ರಚಾರ, ತೇಜೋವಧೆ ಎಂದರಿತ ಕೆಲವು ಪ್ರಚಂಡರು ಹೂಡದ ತಂತ್ರಗಳಿಲ್ಲ. ಭಕ್ತಿ–ಸಹಕಾರಗಳ ಸೋಗು ಒಂದು ಕಡೆಯಾದರೆ 'ನಮ್ಮನ್ನು ಇದಿರು ಹಾಕಿಕೊಂಡು ಏನು ಮಾಡುವನೋ ? ನೋಡೋಣ' ಎಂಬ ಸವಾಲು ಮಿಶ್ರಿತ ಬೆದರಿಕೆ ಮತ್ತೊಂದು ಕಡೆ.



'Spiritualise the politics' ಎಂಬ ಮಹಾತ್ಮಗಾಂಧಿ ಕರೆಯು ಇಂದು ತದ್ವಿರುದ್ಧವಾಗಿ ಅಧ್ಯಾತ್ಮರಂಗ ರಾಜಕೀಯ ಮನೋಭಾವದಿಂದ ಕಲುಷಿತಗೊಳ್ಳುತ್ತಿದೆ. ಬೆದರುಗೊಂಬೆಯಂತೆ ಒಂದು ಸ್ವಾಮಿಯನ್ನು ಅಧಿಕಾರದಲ್ಲಿರಿಸಿ, ತಮ್ಮ ಕಟ್ಟಡಗಳ ಅಂತಸ್ತುಗಳನ್ನು ವಿಸ್ತರಿಸುವ ಮಹಾನುಭಾವರು ಅನೇಕರು, ವಿಷವರ್ತುಲದಲ್ಲಿ ಸಿಕ್ಕಿ ಬಿದ್ದಂತಹ ನಿಸ್ಸಹಾಯಕ ಪರಿಸ್ಥಿತಿ ಕೆಲವು ಮಠಾಧಿಕಾರಿಗಳದು. ಧರ್ಮ–ಸಮಾಜಗಳ ದುಡ್ಡನ್ನು ನಿರ್ಭಯವಾಗಿ ತಿನ್ನುವ ಕೆಲವು ಏಜೆಂಟರಂತೂ ಭಾರೀಕುಳಗಳು. ಸೋರು ಕಾಲುವೆಯಂತೆ, ಭಕ್ತರು ಹರಿಸುವ ಸಹಾಯವನ್ನು ನುಂಗಿ ನೀರು ಕುಡಿಯುವರು. ಇನ್ನು ಕೆಲವು ಸಂಘ–ಸಂಸ್ಥೆ, ಉತ್ಸವಗಳ ರೀತಿಯಂತೂ ವರ್ಣಿಸಲಸದಳ. ಊರಿಂದ ಊರಿಗೆ ಸ್ಪರ್ಧೆ. ಗಣಪತಿ ಉತ್ಸವಕ್ಕೆ ಅವರು ಒಂದು ಲಕ್ಷ ವ್ಯಯಿಸಿದರೆ ನಾವೇನೂ ಕಡಿಮೆಯಿಲ್ಲ ಎಂಬ ಹಟ. ಎಲ್ಲರಿಗೂ ಬಲಿಪಶು ಶ್ರೀ ಸಾಮಾನ್ಯ. ಧರ್ಮ ಪ್ರಚಾರವಾಗಲೀ ಎಂಬ ಮನೀಷೆಗಿಂತ, ಜನರ ನೈತಿಕತೆ ಜಾಗೃತವಾಗಲೆಂಬ ಕಳಕಳಿಗಿಂತ ಇದೊಂದು ಆದಾಯಕರ ವ್ಯಾಪಾರ ಎಂಬ ನಂಬಿಗೆಯೇ ಅನೇಕರಲ್ಲಿರಬಹುದು. ಯಾವುದೇ ಇನ್‌ವೆಸ್ಟ್‌ಮೆಂಟ್ ಇಲ್ಲದೆ ಮಾಡುವ ವ್ಯಾಪಾರವಾಗಿ, ಅಧಿಕ ಆದಾಯ ನೀಡುವುದಿದರ ವೈಶಿಷ್ಟ್ಯ.

ಹೊಳೆಯಂತೆ ಹರಿದು ಬರುವ ಹಣದ ಆದಾಯವಿದ್ದೂ ಎದ್ದು ಕಾಣುವಂಥ ಯಾವುದೇ ಸಮಾಜ ಸೇವೆ ಮಾಡದ ಸಂಘ ಸಂಸ್ಥೆ ಹಲವಾರು. ಹೇಗೆ ವ್ಯಾಪಾರೋದ್ಯಮಗಳಲ್ಲಿ "ಪಬ್ಲಿಕ್ ಸೆಕ್ಟಾರ್" ಗಿಂತಲೂ ವೈಯುಕ್ತಿಕ ಉದ್ಯಮಗಳು ಲಾಭದಾಯಕ ಪ್ರಗತಿ ಸಾಧಿಸುವವೋ ಹಾಗೆ, ಸಮುದಾಯ ಧಾರ್ಮಿಕ ಸಂಸ್ಥೆಗಳಿಗಿಂತ ನಿಸ್ವಾರ್ಥ ವ್ಯಕ್ತಿಯ ನೇತೃತ್ವದಲ್ಲಿ ನಡೆವ ಸಂಸ್ಥೆಗಳೇ ಮುನ್ನಡೆವವು. ಕೆಲವೊಮ್ಮೆ ಕುಕಾರ್ಯಗಳಲ್ಲಿ ಹಂಚಿಕೊಳ್ಳುವ ಪ್ರವೃತ್ತಿಯೂ ಇರುವುದರಿಂದ ಒಬ್ಬ ಇನ್ನೊಬ್ಬನ ಹುಳುಕನ್ನು ತೋರದೆ, ಪರಸ್ಪರ ಹೊಂದಾಣಿಕೆ ಮಾಡಿ ಹಂಚಿಕೊಳ್ಳುವರು. ಇಂಥಾ ಸಂಸ್ಥೆಗಳ ಕಾರ್ಯಸಾಧನೆಯಂತೂ ಅಡಿವಡೆದ ಕುಂಭದಲ್ಲಿ ಸುಜಲವ ಬೈಚಿಟ್ಟಂತೆ." ಕೆಲವರಂತೂ ಕೆಲವು ಉತ್ಸವಗಳಿಗೆ ದಬದಬ–ದುಬುದುಬು ಓಡಾಡಿ ಧರ್ಮ ಸೇವಾಧುರಂಧರರು, ಸಮಾಜ ಹಿತ ಚಿಂತಕರು, ಉದ್ಧಾರಕರು ಎಂಬ ಕೀರ್ತಿಗೆ ಪಾತ್ರರಾಗಿರುತ್ತಾರೆ. ಪಾತಾಳ ಗರಡಿ ಹಾಕಿ ಅವನ ಬದುಕನ್ನು ಸೋಸಿದಾಗ ಅಧ್ಯಾತ್ಮ ಪ್ರವೃತ್ತಿ–ಧರ್ಮಶ್ರದ್ಧೆ ಎಳ್ಳಷ್ಟೂ ಸಿಗದು. ಜನರಲ್ಲಿ ಶಾಶ್ವತ ಪರಿವರ್ತನೆ ತರುವ ಅಧ್ಯಾತ್ಮಿಕ ಕಾರ್ಯಕ್ರಮಕ್ಕೆ ಕೈ ಹಾಕುವವರನ್ನು ಇವರು ಜಪ್ಪಯ್ಯ ಎಂದರೂ ಬೆಂಬಲಿಸರು. ಇಂಥಾ ಹಲವಾರು ಪ್ರಸಂಗ ಗಮನಿಸಿ ಹೀಗೇಕೆ ? ಎಂದು ತಲೆ ಕೆರೆದುಕೊಳ್ಳುತ್ತಿದ್ದೆ ನಾನು. ಅತಿ ಉತ್ಸಾಹದಿಂದ ಒಂದು ಎರಡು ಮೂರು ದಿನಗಳ ಮೆರವಣಿಗೆ ಉರವಣಿಗೆ, ಅಡ್ಡ ಪಲ್ಲಕ್ಕಿ–ಗಿಡ್ಡ ಪಲ್ಲಕ್ಕಿ ಎಂದು ಮುಂತಾಗಿ ಸಡಗರಿಸುವವರು, ಶಾಶ್ವತ ಕಾರ್ಯಕ್ರಮ

ಹಾಕಿಕೊಳ್ಳುವುದಿಲ್ಲವೇಕೆ ಎಂಬುದು ಬಗೆಹರಿಯದ ಸಮಸ್ಯೆಯಾಗಿತ್ತು. ಧುಮ್ಮಿಕ್ಕುವ ಜಲಪಾತದಿಂದ ಒಂದು ಕೊಡ ನೀರನ್ನು ತುಂಬಿಕೊಳ್ಳುವುದು ಹೇಗೆ ಅಸಾಧ್ಯವೋ, ಬಿಂದಿಗೆ ತುಂಬಲು ಪ್ರಶಾಂತವಾಗಿ ಹರಿವ ನದಿ, ಭಾವಿಗಳೇ ಹೇಗೆ ಸರಿಯೋ ಹಾಗೆ ಜನಸಾಮಾನ್ಯರ ವೈಚಾರಿಕ ಜಾಗೃತಿಗೆ ಅಂದಾದುಂದಿ ಕಾರ್ಯಕ್ರಮಗಳಿಂದ ಪ್ರಯೋಜನವಾಗದು. ಆದರೂ ಕೆಲವರಿಗೆ ಅದರಲ್ಲಿ ಅತ್ಯುತ್ಸಾಹ.

ನನ್ನ ಟ್ಯೂಬ್ ಲೈಟ್ ತಲೆಗೆ ಕಾರಣ ಹೊಳೆದುದು ತುಂಬಾ ತಡವಾಗಿ. ಕೆಲವರಿಗೆ ಇದೇ ಸುಗ್ಗಿಯ (Harvest) ಕ್ಷಣಗಳು, ಬ್ಯಾಂಕ್ ಬ್ಯಾಲೆನ್ಸ್ ಉಬ್ಬಿಸಲು ಎಂಬುದು ಆನಂತರ ಹೊಳೆಯಿತು. ರಸ್ತೆ ಮಗ್ಗುಲಲ್ಲಿರುವ ಸರ್ಕಾರಿ ಮಾವಿನ ಮರವನ್ನು ಅವರಿಷ್ಟು ಇವರಿಷ್ಟು ತರಿದು ಹಣ್ಣು ಒಯ್ವಂತೆ, ಅವನಿಗೆ ಸಿಕ್ಕಷ್ಟು ಅವನು ತಿನ್ನಲಿ, ನನಗೆ ಸಿಕ್ಕಷ್ಟು ನಾನು ತಿನ್ನುವೆ ಎಂಬ ಸಹಕಾರೀ? ಮನೋಭಾವ. ಸಮಷ್ಠಿ–ಸಮಾಜಗಳ ಹಣವನ್ನು ವ್ಯಕ್ತಿಗತ ಉಪಯೋಗಕ್ಕೆ ಸಲ್ಲಿಸತಕ್ಕುದಲ್ಲ ಎಂಬ ಪ್ರಜ್ಞೆಯೇ ಬಹಳ ಜನಕ್ಕಿರದು. ಹೀಗಾಗಿ ಅನೇಕ ಸಂಘ–ಸಂಸ್ಥೆಗಳು ಕ್ಷಯರೋಗ ಪೀಡಿತ. ದುಡಿಯುವವರ ಸಂಬಳದಲ್ಲಿ ಕಡಿತ.

ಹೀಗೆ ಧರ್ಮ ಸಂಸ್ಥೆಗಳು, ವಿದ್ಯಾ ಸಂಸ್ಥೆಗಳು ಇತ್ಯಾದಿ ಧರ್ಮದರ್ಶಿ (?) ಗಳ ಜೇಬುಗಳನ್ನುಬ್ಬಿಸುವ ಸಾಧನಗಳೆಂದೇ ಅನೇಕರು ಸೇವಾ (ಸೇವನಾ) ಕಾರ್ಯಕ್ಕಿಳಿದರೆ ಸಮಾಜ ಸೇವೆ ಅದೆಂತು ಸಾಧ್ಯ ! ತಾಯಿಯ ಹಾಲನ್ನು ಕುಡಿಯಲು ಹಕ್ಕುಂಟು, ರಕ್ತವನ್ನಲ್ಲ ; ಹಾಗೆಯೇ ತಾನು ಆಶ್ರಯಿಸಿದ ಸಂಸ್ಥೆಯ ಅಭಿವೃದ್ಧಿಯನ್ನು ಏಕ ನಿಷ್ಠೆಯಿಂದ ಮಾಡಿ ತನ್ಮೂಲಕ ಜೀವನದ ನಿರ್ವಹಣೆ ಮಾಡಿಕೊಳ್ಳಲಿ. ಅದು ಬಿಟ್ಟು ಯಾರೋ ಕಟ್ಟಿದ ಸಂಸ್ಥೆಯ ಬುಡಕ್ಕೆ ಕೊಡಲಿ ಹಾಕುವಂತೆ ಹೀರ ತೊಡಗಿದರೆ ಗತಿ ಏನು ? ಕೆಲವೊಮ್ಮೆಯಂತೂ ದಾನಮಾಡಿ, ಸಂಸ್ಥೆ ಕಟ್ಟಿ, ಧರ್ಮದರ್ಶಿಗಳನ್ನು ನೇಮಿಸಿ ಕಡೆಗೆ ಬಂದವರ ಉಪಟಳಕ್ಕೇ ಬೇಸತ್ತು ಮೂಲಸ್ಥಾಪಕರೇ ಸಂಸ್ಥಾ ತ್ಯಾಗ ಮಾಡುವ ಸಂದರ್ಭಗಳೂ ಒದಗಬಹುದು. ಈ ದುರ್ಧರ ಪ್ರಸಂಗಗಳು ತಪ್ಪಬೇಕು.

ಸೇವೆ ಮಾಡುವ ನಿಷ್ಠೆಯುಳ್ಳವರು ಮಾತ್ರವೇ ಸಂಸ್ಥೆಗಳಲ್ಲಿ ಸೇರಬೇಕು ; ಅಧಿಕಾರದಾಸೆಗಾಗಿ ಅಲ್ಲ, ಕೀರ್ತಿವಾರ್ತೆಗಾಗಿ-ಹಣಕ್ಕಾಗಿ ಅಲ್ಲ. ವ್ಯಕ್ತಿಗತ ಕೋಶಾಗಾರ ತುಂಬಿಕೊಳ್ಳುವ ಸ್ವಾರ್ಥಕ್ಕಿಂತಲೂ ತನ್ನ ಸಮಾಜದ ಮುಂದಿನ ಹಿತಕ್ಕಾಗಿ ತ್ಯಾಗ ಪೂರ್ಣ ಸಂಸ್ಥೆಗಳ ನಿರ್ಮಾಣ ಮಾಡಬೇಕು. ಅಂದಾಗಲೇ ಮಠ-ಪೀಠ, ಸಂಘ-ಸಂಸ್ಥೆಗಳು ಸರ್ವಾಂಗೀಣವಾಗಿ ಅಭಿವೃದ್ಧಿ ಹೊಂದಲು ಸಾಧ್ಯ.

ಮಾತೆ ಮಹಾದೇವಿ






—ಸದ್ಗುರು ಶ್ರೀ ಲಿಂಗಾನಂದ ಸ್ವಾಮಿಗಳು.

## ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟ

ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ.
ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು ;
ಇಲ್ಲಿ ಸಲ್ಲದವರು, ಅಲ್ಲಿ ಸಲ್ಲರಯ್ಯಾ ಕೂಡಲ ಸಂಗಮ ದೇವಾ !

—ವಿಶ್ವಗುರು ಬಸವಣ್ಣನವರು.

ಈ ಲೋಕವು ಪರಮಾತ್ಮನ ಟಂಕಸಾಲೆ. ಜೀವಿಗಳೆಂಬ ಲೋಹಗಳು ಕಾಯಿಸಿಕೊಂಡು, ಕರಗಿ, ಸಂಸ್ಕರಣಗೊಂಡು ನಾಣ್ಯಗಳಾಗಬೇಕಾದುದು ಇಲ್ಲಿಯೇ. ಚಲಿಸುವ ನಾಣ್ಯ, ಚಿನ್ನದ ನಾಣ್ಯವಾದರೆ ಎಲ್ಲೆಡೆಯೂ ಬೆಲೆಯುಂಟು. ಖೋಟಾ ನಾಣ್ಯವಾದರೆ ಕವಡೆಯಷ್ಟು ಬೆಲೆಯಿಲ್ಲ. ಈ ಲೋಕದಲ್ಲಿ ಅಂದರೆ ಐಹಿಕ ಜೀವನದಲ್ಲಿ ಚಿನ್ನದ ನಾಣ್ಯವಾಗದೆ, ಪರಲೋಕದಲ್ಲಿ ಅಂದರೆ ಪಾರಮಾರ್ಥ ಪಥದಲ್ಲಿ ಸಲ್ಲಲೆಳಸಿದರೆ ಸಾಧ್ಯವಾದೀತೆ ? ಈ ಮರ್ಮವನ್ನೊಳಗೊಂಡ ವಿಶ್ವವಿಭೂತಿ, ಕ್ರಾಂತಿಯೋಗಿ ಬಸವಣ್ಣನವರ ಈ ವಚನವು ಮಾನವನಿಗೆ ಜೀವನ-ಜಗತ್ತುಗಳನ್ನು ಕುರಿತು ವಿನೂತನ, ವಾಸ್ತವಿಕ (Realistic out look) ದೃಷ್ಟಿಕೋನವೊಂದನ್ನು ಅಳವಡಿಸುವದು.

ನಮ್ಮ ಪಂಚೇಂದ್ರಿಯಗಳ ಅಳವಿನಲ್ಲಿ ಸಿಕ್ಕಿ, ಕಣ್ಣೆದುರಿಗಿರುವ ವಿಶ್ವ ಮತ್ತು ಅದನ್ನು ಚಾಲಕ ಶಕ್ತಿಯಾಗಿ ಆಡಿಸುವ ದೇವರು. ಈ ಎರಡರಲ್ಲಿ ಯಾವುದು ಸತ್ಯ,

ಯಾವುದು ಮಿಥ್ಯ ? ಜಗತ್ತಷ್ಟೆ ಸತ್ಯ, ಜಗದೀಶ್ವರ ಮಿಥ್ಯ ಎಂದಾಗ ಭೌತಿಕವಾದದ ಸಿದ್ಧಾಂತ ರೂಪು ಗೊಂಡರೆ, ಜಗತ್ತು ಮಿಥ್ಯ ಜಗದೀಶ್ವರ ಸತ್ಯ ಎಂದಾಗ ಮೈದಳೆಯುವುದು ಕೇವಲಾದ್ವೈತವಾದ. ಭೌತಿಕವಾದವು ಧರ್ಮ-ಅಧ್ಯಾತ್ಮಗಳನ್ನು ಕಡೆಗಣಿಸಿದರೆ, ಕೇವಲಾದ್ವೈತವಾದ ವಿಜ್ಞಾನ-ಕಲೆಗಳನ್ನು ತಿರಸ್ಕರಿಸುವದು. ದೇವನಷ್ಟೇ ಸತ್ಯವೆಂದು ಜಗದ ಅಸ್ತಿತ್ವ ಹೀಗಳೆದಾಗ ಈ ವಿಚಾರದ ಅಡಿಪಾಯದ ಮೇಲೆ ಹೇಳುವದು ಜಗತ್ತು ಮತ್ತು ಜೀವನಗಳ ನಿರಾಕರಣ, ನಿಷೇಧೀಕರಣ ಸಿದ್ಧಾಂತ. ಆಗ ಇಹಲೋಕದ ಚಟುವಟಿಕೆಗಳಿಗೆ, ಕಾಯ-ಇಂದ್ರಿಯಗಳ ವ್ಯವಹಾರಕ್ಕೆ ಯಾವ ಬೆಲೆಯೂ ಇಲ್ಲ. ಕೇವಲ ಪಾರಲೌಕಿಕ ವೃತ್ತಿಗೆ ಮಾತ್ರ ಪಟ್ಟ. ಇದನ್ನರಿತು ಬಸವಣ್ಣನವರು ಲೋಕವನ್ನು ಮಿಥ್ಯವೆಂದು ಅಲ್ಲಗಳೆಯದೆ, ಅದು ಶಿವನ ಲೀಲಾರಂಗವೆಂದು, ಸತ್ಯ-ಶಿವ-ಸುಂದರಗಳ ರಸಬುಗ್ಗೆಯೆಂದು, ಕರ್ತಾರನ ಕಮ್ಮಟವೆಂದು ನುಡಿದರು. ಪರಿಣಾಮವಾಗಿ ಅವರದ್ದು ಲೋಕ ಮತ್ತು ಜೀವನಗಳ ನಿರಾಕರಣ, ನಿಷೇಧೀಕರಣ ಸಿದ್ಧಾಂತವಾಗದೇ ಉಪಯೋಗೀಕರಣ, ಉದಾತ್ತೀಕರಣಗಳ ಸಿದ್ಧಾಂತವಾಯಿತು ; ನಿರಾಶಾವಾದೀ, ಮರಣದ ವಿಚಾರಧಾರೆಯಾಗದೆ ಆತ್ಮವಿಶ್ವಾಸದ ಹೆಜ್ಜೆಹಾಕುವ ಜೀವನ ವಿಚಾರವಾಹಿನಿಯಾಯಿತು. ಬಸವಣ್ಣನವರ ಈ ವಾಸ್ತವಿಕವಾದದ ಪ್ರಕಾರ ಜೀವನೆಂಬ ಸಾಧಕನು ಜಗತ್ತನ್ನು ಹೇಯವೆಂದು ತಿರಸ್ಕರಿಸುತ್ತ ಈಶ್ವರನತ್ತ ಸಾಗದೆ, ಲೋಕ ಜೀವನವನ್ನು ಸಾಧನವಾಗಿ ಮಾಡಿಕೊಂಡು, ಅದರಿಂದ ಕಲಂಕಿತನಾಗದೆ, ಅದರ ಮೂಲಕವೇ ಈಶ್ವರ ಪ್ರೇಮವನ್ನು ಗಳಿಸಬೇಕು. ಈ ಜಗತ್ತು ಹೇಯವಲ್ಲ, ಪ್ರೇಯ ; ತ್ಯಾಜ್ಯವಲ್ಲ ಪೂಜ್ಯ ; ಮಾರಕವಲ್ಲ ಪೂರಕ ; ಬಾಧಕವಲ್ಲ ಸಾಧಕ. ಈ ಕರ್ತಾರನ ಕಮ್ಮಟ ಜೀವರುಗಳನ್ನು ಪರಿಪಕ್ವಗೊಳಿಸುವ ಕಾರ್ಯಾಗಾರ. ಕೀಟ್ಸ್ ಕವಿಯು ಇದೇ ವಿಚಾರವನ್ನೇ 'This world is a vale of soul Making' ಎಂಬಲ್ಲಿ ತಿಳಿಸಿರುವ. ಆದ್ದರಿಂದ ಲೋಕವಿದು ಆತ್ಮರುಗಳನ್ನು ಸಂಸ್ಕರಿಸುವ ಕರ್ಮಭೂಮಿ ; ಮುಕ್ತಿ ನೀಡುವ ಯೋಗಭೂಮಿ, ತ್ಯಾಗ-ಸೇವೆಗಳಿಗೆ ಅವಕಾಶ ನೀಡುವ ತ್ಯಾಗಭೂಮಿ.

ಇದೇ ರೀತಿ ಮಾನವನ ಶರೀರ ಇಂದ್ರಿಯಗಳೂ ಸಹ ತಿರಸ್ಕರಣೀಯವಲ್ಲ. ಇಂದ್ರಿಯಾಪೇಕ್ಷೆಯಲ್ಲಿ ತನ್ಮಯವಾದಾಗ ಮಾರಕವಾಗಬಲ್ಲ ಶರೀರವೇ ದೈವಿ ಪ್ರಪಂಚದಲ್ಲಿ ಹರಿದಾಗ ಪೂರಕವಾಗಬಲ್ಲುದಾದ್ದರಿಂದ, ಕೂಡಲಸಂಗನ ಒಲಿಸ ಬಂದ ಪ್ರಸಾದ ಕಾಯವಿದನ್ನು ಉದಾಸೀನದಿಂದ ಕಾಣಬಾರದು. ಇದನ್ನು ಹೇಯ-ಮಾರಕ ಎಂದು ಭಾವಿಸಿ, ಕಠಿಣಾಚರಣೆ, ತೀವ್ರ ವ್ರತಗಳಿಂದ ಕ್ಷೀಣಿಸಿ ದುರ್ಬಲನಾಗಿ ಜಗತ್ತಿಗೆ ಏನೂ ಮಾಡದಿರುವದಕ್ಕಿಂತ ಅದರ ಸೌಖ್ಯವನ್ನು ಸಾತ್ವಿಕವಾಗಿ ರಕ್ಷಿಸಿ ಜಗದ್ಹಿತಾರ್ಥಕ್ಕೆ ಸವೆಸುವದು ಶ್ರೇಯಸ್ಕರ. ಇದನ್ನು ಬಸವಣ್ಣನವರ ಮಾತಿನಲ್ಲೇ ನೋಡೋಣ.



ಒಲ್ಲೆನೆಂಬುದು ವೈರಾಗ್ಯ, ಒಲಿವೆನೆಂಬುದು ಕಾಯ ಗುಣ
ಆವ ಪದಾರ್ಥವಾದೊಡೇನು ? ತಾನಿದ್ದೆಡೆಗೆ ಬಂದುಧ
ಲಿಂಗಾರ್ಪಿತವ ಮಾಡಿ ಸ್ವೀಕರಿಸುವುದೇ ಆಚಾರ.
ಕೂಡಲಸಂಗಮ ದೇವರನೊಲಿಸ ಬಂದ ಪ್ರಸಾದಕಾಯವ ಕೆಡಿಸಲಾಗದು.

ಅದು ಬೇಡ ಇದು ಬೇಡ ಎಂದು ಮೂಗೆಳೆಯುವದು ಬೇಡ, ಅದು ಬೇಕು ಇದು ಬೇಕು ಎಂದು ದುರಾಸೆ ವ್ಯಕ್ತಪಡಿಸುವುದೂ ಬೇಡ. ತಾನಾಗಿ ಬಂದುದು ಶಿವನ ಪ್ರಸಾದ. ಅದನ್ನು ಸಂತೃಪ್ತಿಯಿಂದ ಸ್ವೀಕರಿಸಿ, ಶರೀರವನ್ನು ಸಂರಕ್ಷಿಸಿ, ಶ್ರೀಗಂಧ ಸವೆದು ಗಂಧವನ್ನೀಯುವಂತೆ ಜಗತ್ತಿನ ಉಪಕಾರಕ್ಕೆ ಬಳಸಬೇಕು. ಈ ವಿಚಾರವನ್ನು ಅಕ್ಕಮಹಾದೇವಿ ಬಹುಮನನೀಯವಾಗಿ ಹೇಳುವಳು :

ಹಾವಿನ ಹಲ್ಲಕಳೆದು ಹಾವನಾಡಿಸಬಲ್ಲಡೆ
ಹಾವಿನ ಸಂಗವೇ ಲೇಸು ಕಂಡಯ್ಯಾ
ಕಾಯದ ಸಂಗವ ವಿವರಿಸಬಲ್ಲೊಡೆ
ಕಾಯದ ಸಂಗೆವೇ ಲೇಸು ಕಂಡಯ್ಯ
ತಾಯಿ ರಕ್ಕಸಿಯಾದಂತೆ ಕಾಯ ವಿಕಾರವು
ಚನ್ನಮಲ್ಲಿಕಾರ್ಜುನ ನೀನೊಲಿದವರ ಕಾಯಗೊಂಡಿದ್ದರೆನಬೇಡ.

ವಿಷದ ಹಲ್ಲನ್ನು ಕಳೆದು ಭಯಾನಕವಾದ ಹಾವನ್ನು ಸಹಾಯಕ ಮಾಡಿಕೊಳ್ಳಬಹುದಾದಂತೆ ಕಾಯಮನಗಳ ವಿಷಯಾಸಕ್ತಿ ಕಳೆದು ಅವನ್ನು ದೇವನಿಗೆ ದಿವ್ಯವಾಗುವಂತೆ ಮಾಡಬಹುದು.

ಯಾವಾಗ ಈ ಜಗತ್ತು ಮತ್ತು ಜೀವನವನ್ನು ಹೇಯವೆಂದು, ಮಿಥ್ಯವೆಂದು ತಿಳಿಯದೆ ಶಿವನ ವರವೆಂದು ತಿಳಿಯುವೆವೋ, ಅವುಗಳ ಕ್ಷೇಮ ಮತ್ತು ವ್ಯವಸ್ಥೆ ಭಕ್ತನ ಆದ್ಯ ಕರ್ತವ್ಯ. ಅಂತೆಯೇ ನಿಜಭಕ್ತನಾಗಬೇಕಾದರೆ ಪೂಜೆಗೆ ಕೊಡುವಷ್ಟೇ ಸ್ಥಾನವನ್ನು ಮಾನವ ಸೇವೆಗೂ ಕೊಡಬೇಕು. ಎಡದ ಕೈಯಲ್ಲಿ ಲಿಂಗಪೂಜೆ, ಬಲದ ಕೈಯಲ್ಲಿ ಜಂಗಮ ಸೇವೆ ಅರ್ಥಾತ್ ಸಮಾಜ ಸೇವೆ. ಜ್ಞಾನಿಯಾದವನು ಕೇವಲ ತನ್ನಾತ್ಮೋದ್ಧಾರ ಮಾಡಿಕೊಂಡ ಮಾತ್ರಕ್ಕೆ ತೃಪ್ತನಾಗಬಾರದು ; ತಾನು ಸಮಷ್ಟಿಯ ಋಣವನ್ನುಂಡು, ಪೋಷಣೆಗೊಂಡು ಅದರ ಅವಿಭಾಜ್ಯ ಅಂಗವಾಗಿ ಬೆಳೆದವನು. ಅದರ ಸೇವೆ ತನ್ನ ಕರ್ತವ್ಯವೆಂಬ ಬಗ್ಗೆ ಅರಿಯಬೇಕು. ಕೇವಲ ಮೋಕ್ಷಾಪೇಕ್ಷಿಗಳಾದವರನ್ನು ಟೀಕಿಸುತ್ತ ಬಸವಣ್ಣನವರು ಹೀಗೆ ಹೇಳುವರು.

ಕಣ್ಣು ಮುಚ್ಚಿ ಕನ್ನಡಿಯ ತೋರುವಂತೆ, ಇರುಳು ಹಗಲಿನ ನಿದ್ರೆ ಸಾಲದೆ
ಬೆರಳನೆಣಿಸಿ ಪರಮಾರ್ಥವ ಹಡೆವಡೆ ಚೋದ್ಯವಲ್ಲವೆ ಹೇಳಾ !

ಮೂಗ ಮುಚ್ಚಿ ಮುಕ್ತಿಯ ಬಯಸುವ
ನಾಚಿಕೆ ಇಲ್ಲದವರನೇನೆಂಬೆ ಕೂಡಲ ಸಂಗಮ ದೇವಾ.

ಪರಮಾರ್ಥ ಪ್ರಪಂಚದವರಿಗೇಕೆ ಸಮಾಜ ರಾಷ್ಟ್ರಗಳ ಚಿಂತೆ ಎಂದು ಪ್ರಶ್ನಿಸುವವರಿಗೆ ಸವಾಲೊಡ್ಡುವ ಬಸವಣ್ಣನವರು, ಕೂಡಲ ಸಂಗನ ಮಹಾಮನೆಯಾದ ಜಗತ್ತಿನ ಕಲ್ಯಾಣದ ಚಿಂತೆ ಈ ಮಹಾಮನೆಯ ಮಗನಾದ ಅಧ್ಯಾತ್ಮ ಜೀವಿಗೋ ಅಥವಾ ಕೇವಲ ಬಾಡಿಗೆದಾರನಂತಿರುವ ಲೌಕಿಕನಿಗೋ ? ಎಂದು ಕೇಳುವರು. ತನ್ನ ಮೋಕ್ಷಾಪೇಕ್ಷೆಯನ್ನು ಬದಿಗೊತ್ತಿದರೂ ಚಿಂತೆಯಿಲ್ಲ. ಈ ಕರ್ತಾರನ ಮನೆಯ ಜೀವರಾಶಿಗಳ ಸೇವೆಯಲ್ಲಿ ಭಾಗಿಯಾಗಬೇಕು. ಅದುವೇ ನಿಜವಾದ ಪೂಜೆ. ಗಿಡದ ಬೇರಿಗೆ ನೀರುಣಿಸಿದಾಗ ವೃಕ್ಷ ಚಿಗುರುವಂತೆ, ಜೀವಂತ ದೇವರುಗಳಾದ ದೀನ ದಲಿತರ ಸೇವೆಗೈದಾಗ ಆ ದೇವರು ತಣಿಯದೆ ಇರನು. ಆದ್ದರಿಂದ ಈ ಕರ್ತಾರನ ಕಮ್ಮಟದಲ್ಲಿ ಸಲ್ಲಬೇಕಾದರೆ ಪ್ರತಿಯೋರ್ವನು ದೇವನ ಪೂಜೆ ಮತ್ತು ಮಾನವ ಸೇವೆಗಳನ್ನು ಅತ್ಯವಶ್ಯವಾಗಿ ಅಳವಡಿಸಿಕೊಳ್ಳಬೇಕು.

ಧಾರ್ಮಿಕ ನೇತಾರರು, ಮಠಪೀಠಾಧಿಪತಿಗಳು, ಧರ್ಮಬೋಧಕರ ಮೇಲೆ ಇಂದು ಬಹುದೊಡ್ಡ ಹೊಣೆಯಿದೆ. ಅವರು ಸಮಾಜದ ಹಿತಚಿಂತಕರು ವಿಶಾಲಭಾವಿಗಳೂ ಆಗಿ ಮನೋವಿಜ್ಞಾನಿಗಳ ಪಾತ್ರವನ್ನು ವಹಿಸಬೇಕಾಗಿದೆ. ಪ್ರಕೃತಿ, ಪರಿಸರ, ಸಾಮಾಜಿಕ ಘರ್ಷಣೆಗಳಿಗೆ ಸಿಕ್ಕು ನೊಂದವರನ್ನು ಸಾಂತ್ವನಿಸಬೇಕಾಗಿದೆ. ತಾವೇನೋ ಉಳಿದೆಲ್ಲರಿಗಿಂತ ಭಿನ್ನರು ಮತ್ತು ಶ್ರೇಷ್ಠರು ಎಂಬ ಸ್ವಯಂಕಲ್ಪಿತ ಅಡ್ಡಗೋಡೆಗಳನ್ನು ಕೆಡವಿ ವಾಸ್ತವವಾದಕ್ಕೆ ಇಳಿದು ಜನಸಾಮಾನ್ಯರ ಬಳಿಗೆ ಬರಬೇಕಾಗಿದೆ. ರೋಗಿಗಳಿಗೇ ಹೇಗೆ ವೈದ್ಯರ ನೆರವು ಅವಶ್ಯಕವೋ ಹಾಗೆ ಯಾವುದೋ ಕಾರಣದಿಂದ ಬಿಸಿಯುಸಿರು ಬಿಡುವವರಿಗೆ ತಣಿವೀವ ವ್ಯಕ್ತಿಗಳಾಗಬೇಕಾಗಿದೆ. ಈಗಾಗಲೇ ಕೀಳು ಜಾತಿಯಲ್ಲಿ ಹುಟ್ಟಿದ ತಾವು ಪಾಪಾತ್ಮರು, ಬಡತನದ ಬವಣೆಗೆ ಈಡಾಗಿರುವವರು ಹೀನಕರ್ಮಿಗಳು ಎಂಬ ಕೀಳರಿಮೆ, ಕ್ಲೈಬ್ಯಗಳನ್ನು ಧೈರ್ಯದಿಂದ ಹೊಡೆದು ಓಡಿಸುವ ಮನಃಸ್ಥೈರ್ಯದ ಬೋಧನೆಯಿಂದ, ಬಾಗಿದವರ ಬೆನ್ನನ್ನು ನೆಟ್ಟಗೆ ಮಾಡಬೇಕಾಗಿದೆ. ತಾವು ಆತ್ಮೋದ್ಧಾರ ಮಾಡಿಕೊಂಡು ಕರ್ತಾರನ ಕಮ್ಮಟದಲ್ಲಿ ಚಿನ್ನದ ನಾಣ್ಯಗಳು ಅಥವಾ ಸಲ್ಲುವ ನಾಣ್ಯಗಳು ಆಗುವುದರ ಜೊತೆಗೆ ಈ ಮರ್ತ್ಯವನ್ನು ದೇವನ ಮಹಾಮನೆಯನ್ನಾಗಿ ಮಾಡಬೇಕಾಗಿದೆ.

★★

ಕೊಟ್ಟ ಕುದುರೆಯ ನೇರದೆ ಮತ್ತೊಂದು ಕುದುರೆಯ
ಬಯಸುವವರು ವೀರರೂ ಅಲ್ಲ, ಧೀರರೂ ಅಲ್ಲ.

—ಅಲ್ಲಮಪ್ರಭು.



# ಸಮಸ್ಯೆ! ಸಮಾಧಾನ!

**—ರಾಜಶೇಖರ, ಚನ್ನಗಿರಿ.**

★ ಅವಿವಾಹಿತ ಮಗಳಿಗಿಂತಲೂ ಹೆಚ್ಚಿನ ತಿರಸ್ಕಾರದಿಂದ ನಿರುದ್ಯೋಗಿ ಪದವೀಧರನಾದ ನನ್ನನ್ನು ತಾಯಿ ತಂದೆ ಕಾಣುವರು. ಹೀಗೇಕೆ ?

* ಉದ್ಯೋಗವು ಪುರುಷನ ಲಕ್ಷಣ. ಸ್ತ್ರೀಯು ತಿರುಗಿ ಕೆಟ್ಟರೆ, ಪುರುಷನು ಕುಳಿತು ಕೆಡುವನು. ಆದ್ದರಿಂದ ಈ ಉದಾಸೀನತೆಯಿಂದಲಾದರೂ ನೀವು ಹೊರಬಿದ್ದು ಸ್ವಂತ ಕಾಲ ಮೇಲೆ ನಿಲ್ಲುವಂತಾಗಲೆಂಬ ಔದಾರ್ಯದಿಂದ ಹೀಗೆ ಕಾಣುತ್ತಿರಬೇಕು.

**—ಬೀದಿ ಕಾಮಣ್ಣ, ಊರಿನ್ನೇಕೆ ?**

★ ತುಂಬಾ ಸೌಜನ್ಯಶೀಲೆ, ಮೃದು ಎಂದು ಭಾವಿಸಿದ್ದ ಓರ್ವ ತರುಣಿ ನಾನು ಕೆಣಕಿದಾಗ ತಿರುಗಿ ಬಿದ್ದಳು. ಅವಳ ಧೈರ್ಯ ಕಂಡು ತತ್ತರಿಸಿ ಬಿಟ್ಟೆ. ಇಂಥ ಮೃದು ಹೆಣ್ಣು ಇಷ್ಟು ದಿಟ್ಟಳಾಗಬಲ್ಲಳೇ ?

* ಹೆಣ್ಣು ಒಲಿದರೆ ವೀಣೆಯ ಇಂಚರ: ಕೆರಳಿದರೆ ಚಂಡ ಮದ್ದಳೆಯ ಗದ್ದಲ ಎಂಬುದು ಮನದಟ್ಟಾಯಿತೆ ? ಮುಂದಾದರೂ ಎಚ್ಚರವಾಗಿರಿ.

**—ಶ್ರೀಮತಿ ಲತಾರಾವ್, ಭದ್ರಾವತಿ.**

★ ನಾನೋರ್ವ ದುರ್ದೈವಿ ವಿಧವೆ. ಉಣಲುಡಲು ಕೊರತೆಯಿಲ್ಲ. ಪುನರ್ವಿವಾಹಕ್ಕೆ ಮನಸ್ಸಿಲ್ಲ. ಆದರೆ ಏನೋ ಸುಖದಿಂದ ವಂಚಿತಳಾದ ನಿರಾಶಾಭಾವ. ಮುಂದೇನು ?

* ಬಾಳಿಗೊಬ್ಬ ಸಂಗಾತಿಯ ಅವಶ್ಯಕತೆ ಉಂಟೇ ಉಂಟು ಎನಿಸಿದರೆ ಮದುವೆಯಾಗಿ. ಇಲ್ಲವಾದರೆ ವಿಧಿ ಇತ್ತ ಶಾಪವನ್ನೇ ವರವನ್ನಾಗಿ ಪರಿವರ್ತಿಸುವಂತೆ, ಮನಸ್ಸನ್ನು ಸಾಹಿತ್ಯ, ಧರ್ಮ, ಧ್ಯಾನ ಮುಂತಾದುವುಗಳಲ್ಲಿ ತೊಡಗಿಸಿ ಶಾಂತಿಯನ್ನು ಕಂಡುಕೊಳ್ಳಿರಿ. ಮೀರಾ, ಲಲ್ಲೇಶ್ವರಿ ಇವರ ಆದರ್ಶ ಕಣ್ಣ ಮುಂದಿರಲಿ.

—ಲಕ್ಕಣ್ಣ, ರಿಪ್ನೊ.

★ ಮದುವೆ ಮುನ್ನಿನ ಪ್ರೇಮಕ್ಕೂ, ಮದುವೆ ನಂತರದ ಪ್ರೇಮಕ್ಕೂ ಮತ್ತು ಒಂದು ಮಗುವಾದ ನಂತರದ ಪ್ರೇಮಕ್ಕೂ ಇರುವ ಅಂತರವೇನು ?

* ಮದುವೆಗೆ ಮೊದಲು ಹುಲ್ಲಿನ ಬೆಂಕಿ; ಮದುವೆಯ ಬಳಿಕ ಕಬ್ಬಿಣದ ಕಾವು, ಮಗುವಾದ ನಂತರ ಉರಿಯುವ ಪ್ರಶಾಂತ ದೀಪ. ಪರಸ್ಪರರು ಹೆಚ್ಚು ಹೆಚ್ಚು ಅರಿಯುತ್ತ ಹೋದಂತೆ ಕಾಮದ ಹೊಗೆ ಆರಿ, ಪ್ರೇಮದ ನಂದಾದೀಪವಾಗುತ್ತದೆ.

—ಮಣಿಮಾಲಾದೇವನ್, ಶಿವಮೊಗ್ಗ.

★ ಪರಮಾತ್ಮನು ಸರ್ವವ್ಯಾಪಕ, ಸರ್ವಾಂತರ್ಯಾಮಿಯಾಗಿರುವಾಗ ಅವನಿಗಾಗಿ ದೇವಾಲಯಗಳನ್ನೇಕೆ ಕಟ್ಟಬೇಕು ?

* ದೇವಾಲಯ ಕಟ್ಟುವ ಅವಶ್ಯಕತೆಯಿಲ್ಲ, ದಿವ್ಯಜ್ಞಾನಾಲಯಗಳ ಅವಶ್ಯಕತೆ ಇದೆ. ಸರ್ವವ್ಯಾಪಕ ಪರಮಾತ್ಮನನ್ನು ಧ್ಯಾನಿಸಲು ಸಾಧಿಸಲು, ಸಾಧನಾ ಮಂದಿರಗಳು ಸಾಕು.

—ಸುಗಂಧ, ಶಿವಮೊಗ್ಗ.

★ ಮೇಲುಕೀಳು ಎಂಬ ಭಾವನೆ ತೊಡೆಯಲು ಏನು ಮಾಡಬೇಕು ?

* ಮೇಲು-ಕೀಳೆಂಬವು ಮನುಜ ಮಾಡಿದ ತಂತ್ರ, ದೇವ ನಿರ್ಮಿತವಲ್ಲ ಎಂಬ ತಿಳುವಳಿಕೆ, ಎಲ್ಲರೂ ಸಮಾನರು ಎಂಬ ನಂಬಿಕೆ, ಅದರಂತೆ ಆಚರಿಸುವ ಸ್ಥೈರ್ಯ ಅಳವಡಿಸಿಕೊಂಡರೆ ಸಾಕು.

—ನ್ಯಾ. ಯ. ಗೋಪಾಲ, ಬಾಪೂಜಿನಗರ.

★ ಪ್ರಪಂಚದಲ್ಲಿ ಎಷ್ಟು ಜನರಿರುವರೋ ಅಷ್ಟು ಭಿನ್ನ ಮುಖಗಳಿವೆ. ಇದರಲ್ಲಿ ದೇವರ ಲೀಲೆ ಏನು ?

* ನರರ ಪಾಪ-ಪುಣ್ಯಗಳ ನರರ ಸೆರಗಿನಲ್ಲಿ ಹಾಕಿ, ವ್ಯಕ್ತಿ ಸ್ವಾತಂತ್ರ, ನೀಡಿ ವೈವಿಧ್ಯತೆ ಕಲ್ಪಿಸಿರುವುದೇ ಅವನ ಲೀಲೆ !

—ಲಿಂ. ಗ. ಮಲ್ಲಪ್ಪ, ಲಿಂಗದಹಳ್ಳಿ.

★ ಅನೇಕ ಧರ್ಮಗಳು, ಅವುಗಳ ಪ್ರವಚನ ಇರುವಾಗ ಸಮಾಜದಲ್ಲಿ ಐಕ್ಯತೆ ಮತ್ತು ಸಮಾನತೆ ಬರಲು ಸಾಧ್ಯವೆ ?



* ವಿಭಿನ್ನ ರೂಪ, ವಿಭಿನ್ನ ಧ್ವನಿಯ ವಾದ್ಯಗಳು ಒಂದಾಗಿ ಏಕತಾನದ ವಾದ್ಯ ಗೋಷ್ಠಿ ಮಾಡಬಹುದಾದರೆ, ವೈವಿಧ್ಯಮಯ ವಿಚಾರಗಳ ಹಲವು ಧರ್ಮಗಳು ಐಕ್ಯತೆಯನ್ನೇಕೆ ಸಾಧಿಸಲಾರವು. ಪರಸ್ಪರ ತಿಳುವಳಿಕೆ ಅತ್ಯಾವಶ್ಯಕ.

—ಎನ್. ಬಿ. ಟೀಕಪ್ಪ, ಶಿವಮೊಗ್ಗ.

★ ಮನುಷ್ಯನು ಗೊತ್ತಿಲ್ಲದೆ ಮಾಡಿದ ತಪ್ಪಿಗೆ ಪರಮಾತ್ಮನ ಕ್ಷಮೆಯುಂಟೆ ?

* ಗೊತ್ತಿದ್ದೂ ತಪ್ಪುಮಾಡಿಯೂ ನಂತರ ಪಶ್ಚಾತ್ತಾಪ ಪಟ್ಟವನಿಗೆ ಕ್ಷಮೆ ಇರುವಾಗ ಅಜ್ಞಾನದಲ್ಲಿ ತಪ್ಪುಮಾಡಿದವನಿಗೆ ಇರುವುದಿಲ್ಲವೆ? ಪ್ರತಿಯೊಬ್ಬ ಪಾಪಿಗೂ ಭವಿಷ್ಯವಿದೆ; ಪ್ರತಿಯೊಬ್ಬ ಸಂತನಿಗೆ ಗತ ಇತಿಹಾಸವಿದೆ.

—ಎಸ್. ಮಂಜುಳಾದೇವಿ, ಶಿವಮೊಗ್ಗ.

★ ಮಲತಾಯಿ ಮಲಮಕ್ಕಳಿಗೆ ಕಷ್ಟ ಕೊಡುವುದೇಕೆ ?

* ಕಣ್ಣೊಳಗೆ ಕಸ ಬಿದ್ದಾಗ ಅದು ತನ್ನದಲ್ಲವಾದ್ದರಿಂದ ಹೊರಗೆ ಹಾಕಲು ಯತ್ನಿಸುವುದು ಕಣ್ಣಿನ ಪ್ರಯತ್ನ. ಹಾಗೆ, ಮಲಮಗು ತನ್ನದಲ್ಲವೆಂಬ ಅಸಹನೆಯಿಂದ ಮಲತಾಯಿ ಮಾಡುವಳು. ಇದು ಸುಪ್ತಮನಸ್ಸಿನ ಪಾಶವಿಕ ವರ್ತನೆ. ಇದಕ್ಕೆ ಅಪವಾದವಾಗಿ ಹೆತ್ತ ಮಕ್ಕಳಿಗಿಂತಲೂ ಹೆಚ್ಚಿನ ಪ್ರೀತಿಯಿಂದ ನೋಡಿಕೊಳ್ಳುವ ಮಲತಾಯಂದಿರುಂಟು.

—ಪಿ. ಈ. ನವಿಲಪ್ಪ, ಸಂತೇಕಡೂರು.

★ ಎಲ್ಲ ಮಠಾಧಿಪತಿಗಳೂ "ಸಾಂಬ ಜಯನಮಃ ಪಾರ್ವತೀ ಪತೇ ಹರಹರ ಮಹಾದೇವ" ಎಂದು ಘೋಷಿಸುವಾಗ, ತಮ್ಮ ಸಂಸ್ಥೆಯವರೇಕೆ "ಜಯಗುರು ಬಸವೇಶ ಹರಹರ ಮಹಾದೇವ" ಎಂದು ಘೋಷಿಸುವುದು ?

* "ಹರಹರ ಮಹಾದೇವ" ಇದು ಶಿವ ವಾಚಕವಿದ್ದರೂ ಸಹ, ಅಖಂಡ ಭಾರತೀಯರ ಜಯಘೋಷಕ ಸೂತ್ರವಾಗಿದೆ. ಶರಣ ಧರ್ಮ ಅಥವಾ ಬಸವ ಧರ್ಮಾನುಯಾಯಿಗಳು ಪಾರ್ವತೀ ಪತಿಯಾದ ಪೌರಾಣಿಕ ಶಿವನನ್ನು ಆರಾಧಿಸುವುದಿಲ್ಲವಾದ ಕಾರಣ ಆ ಪದಪುಂಜ ಬಳಸುವುದಿಲ್ಲ. ಈ ಧರ್ಮದ ಆದ್ಯರು ಬಸವಣ್ಣನವರಾದ ಕಾರಣ ಅವರ ಹೆಸರನ್ನು ಜಯಘೋಷದಲ್ಲಿ ತೆಗೆದುಕೊಳ್ಳಲಾಗುತ್ತಿದೆ. ★




ಸಂಗ್ರಹ : **ಶ್ರೀ ಶಿವಾನಂದ.**

ಚಿಕ್ಕನಾಯಕನ ಹಳ್ಳಿ (ತುಮಕೂರು ಜಿಲ್ಲೆ) ಯಲ್ಲಿ ಪೂಜ್ಯ ಶ್ರೀ ಸದ್ಗುರು ಲಿಂಗಾನಂದ ಸ್ವಾಮಿಗಳ ಪ್ರವಚನ ನಡೆದಿತ್ತು. ದಿನಾಂಕ ೧೫-೧-೭೮ ರಂದು ಅಲ್ಲಿಯ ಶರಣರಾದ ಆತ್ಮಾರಾಮ-ವಿಜಯಲಕ್ಷ್ಮಿ ಎಂಬ ಸತಿಪತಿಗಳು ತಮ್ಮ ಮನೆಗೆ ಪೂಜ್ಯ ಸದ್ಗುರುಗಳನ್ನು ಆಮಂತ್ರಿಸಿ, ಪಾದಪೂಜೆ ಮಾಡಿದರು. ಪಾದಪೂಜೆ ಮತ್ತು ಸಾಮೂಹಿಕ ಪ್ರಾರ್ಥನೆಯ ನಂತರ ಆತ್ಮಾರಾಮರು ಕೇಳಿದರು, 'ಜಾತಿ ಜಾತಿಗಳು ಒಂದಾಗಿ ಅಖಂಡ ಸಮಾಜ ನಿರ್ಮಾಣವಾಗಿ ಭಾವೈಕ್ಯತೆ ಬರುವುದು ಹೇಗೆ ?'

ಪೂಜ್ಯರು ಮರುಪ್ರಶ್ನೆ ಹಾಕಿ, "ಕಬ್ಬಿಣದ ತುಂಡುಗಳನ್ನು ಬೆಸೆಯುವುದು ಹೇಗೆ ?" ಆಗ ಬಂದ ಸಹಜ ಉತ್ತರ. "ಕಬ್ಬಿಣವನ್ನು ಚೆನ್ನಾಗಿ ಕಾಯಿಸಿ ವಿಶಿಷ್ಟ ಬೆಸುಗೆಯ ದ್ರವವನ್ನು ಬಿಟ್ಟು" ಎಂದರು. ಆಗ ಗುರೂಜಿಯವರು ನುಡಿದರು: "ಅದೇ ರೀತಿ ಧರ್ಮಜ್ಞಾನದ ಚಿದಗ್ನಿಯಲ್ಲಿ ಜನರನ್ನು ಪರಿಪಕ್ವಗೊಳಿಸಿ, ವಿಶ್ವ ಪ್ರೇಮದ ದ್ರವವನ್ನು ಎರೆದಾಗ ಮಾತ್ರ ಭಾವೈಕ್ಯತೆ ಸಾಧ್ಯ." ಆತ್ಮಾರಾಮರು ಹರ್ಷಚಿತ್ತರಾದರು.

"ಸ್ವಾಮೀಜಿ, ಮತ್ತೊಂದು ಪ್ರಶ್ನೆ. ಭಾರತದ ಶ್ರೇಷ್ಠ ಸನ್ಯಾಸಿಗಳೆಂದು ಗಣಿಸಲ್ಪಡುವ ಸ್ವಾಮಿ ವಿವೇಕಾನಂದರು ಆಗಾಗ ಮಾಂಸಾಹಾರ ಮಾಡಿದ ಮತ್ತು ಒಮ್ಮೆ ದಾರಿಯ ಬದಿಯಲ್ಲಿದ್ದ ಓರ್ವನಿಂದ ಹುಕ್ಕಾ ಪಡೆದು ಸೇದಿದರಂತೆ. ಇದು ಅವರ ವ್ಯಕ್ತಿತ್ವಕ್ಕೆ ಕಲಂಕ ಪ್ರಾಯವಲ್ಲವೆ ?"

"ಮಾಂಸಾಹಾರವು ಕೆಲವು ಜನಾಂಗದವರಲ್ಲಿ ರೂಢಿಗೊಂಡು ಬಂದ ವ್ಯವಹಾರ. ಆ ವಾತಾವರಣದಲ್ಲಿ ಬೆಳೆದವರಿಗೆ ಅದೇನೂ ಅಪರಾಧವಾಗಿ ಕಾಣದು. ಆದರೆ ಹುಟ್ಟಿದ ಜಾತಿ, ಮನೆಯ ಸಂಸಾರ ಯಾವುದೇ ಇರಲಿ, ಸನ್ಯಾಸಿಗೆ ಮಾಂಸಾಹಾರ ಮುಂತಾದ ತಾಮಸಾಹಾರ ವರ್ಜ್ಯ. ಆ ದೃಷ್ಟಿಯಿಂದ ಮಾಂಸಾಹಾರ ಸೇವನೆ



ಮತ್ತು ಹುಕ್ಕಾ ಸೇವನೆ (ಒಂದೆರಡೇ ಬಾರಿಯಾದರೂ) ತಪ್ಪುಗಳೇ ! ಆದರೆ ಅವರ ಜೀವನದ ಉನ್ನತ ಸಿದ್ಧಿ ಮತ್ತು ತ್ಯಾಗಗಳ ಗಾತ್ರದಲ್ಲಿ ಇವು ಕ್ಷುಲ್ಲಕ ತಪ್ಪುಗಳು. ಆ ರೀತಿಯಲ್ಲಿ ಪಡೆಯುವ ಅಂಕ ಒಂದಾದರೆ ಪಡೆದ ವಿಶೇಷ ಅಂಕಗಳು ತೊಂಭತ್ತೊಂಭತ್ತು ತಾನೆ ? ವಿಶಾಲವಾದ ಕೆರೆಯೊಂದರಲ್ಲಿ ದಾರಿಕಾರನೊಬ್ಬ ಇಳಿದು ಮುಖಮಾರ್ಜನ ಮಾಡಿ ಬಾಯಲ್ಲಿ ನೀರು ಮುಕ್ಕಳಿಸಿ ಉಗುಳಿ ಹೋದರೂ ಕೆರೆಯು ಸಂಪೂರ್ಣ ಹೊಲಸಾಗದು. ಗಾತ್ರ ದೊಡ್ಡದಿದ್ದಾಗ ಇವನು ಮಾಡಿದ ಕೊಳೆ ಗಣನೀಯವಾಗಿ ಅಲ್ಪ. ಹಾಗೆ ಭವ್ಯ ವ್ಯಕ್ತಿತ್ವವಿರುವ ಅವರಲ್ಲಿ ಇಂಥ ಸಣ್ಣ ಲೋಪದೋಷಗಳಿದ್ದರೂ ಅವು ಗೌಣ ಮತ್ತು ಕ್ಷುದ್ರ."

ಆತ್ಮಾರಾಮರು ಇನ್ನೊಂದು ಪ್ರಶ್ನೆ ಹಾಕಿದರು :

"ಗುರೂಜಿ, ನಮ್ಮ ದೇಶದಲ್ಲಿ ಅನೇಕ ಧರ್ಮಗಳಿವೆ. ಅವುಗಳಲ್ಲಿ ಅನೇಕ ಗುರುಗಳಿದ್ದಾರೆ. ಒಂದೇ ಧರ್ಮದಲ್ಲಿಯೂ ಬೇರೆ ಬೇರೆ ಕಾಲಕ್ಕೆ ಬೇರೆ ಬೇರೆ ಗುರುಗಳು ಆಗಿ ಹೋಗಿದ್ದಾರೆ. ಇವರೆಲ್ಲರನ್ನೂ ಗೌರವಿಸುವ ಬಗೆ ಹೇಗೆ ?" "ತನ್ನ ಧರ್ಮದ ಆದ್ಯರನ್ನು ತನ್ನ ಧರ್ಮಗುರುವೆಂದು, ಇತರ ಧರ್ಮದ ಗುರುಗಳನ್ನು ಜ್ಞಾನಗುರುಗಳೆಂದು ಆದರಿಸುವದು ಒಂದು. ಇನ್ನೊಂದು ನೀವು ಅನುಸರಿಸುವ ಧರ್ಮ-ಪಂಥಗಳ ಆದ್ಯನನ್ನು ತಂದೆಯೆಂದು, ಅದಕ್ಕಿಂತಲೂ ಹಿಂದಿನ ಎಲ್ಲ ಮಹಾಂತರನ್ನು ದೊಡ್ಡಪ್ಪಂದಿರಂತೆ, ನಂತರ ಆಗಿ ಹೋದವರನ್ನು ಚಿಕ್ಕಪ್ಪಂದಿರಂತೆ ಗೌರವಿಸಬೇಕು. ಸ್ವಧರ್ಮದ ಗುರುವನ್ನು ತನ್ನ ಧರ್ಮಪಿತ, ಧರ್ಮಗುರುವೆಂದು ಗೌರವಿಸುವ ಸೌಜನ್ಯದೊಡನೆ ಉಳಿದೆಲ್ಲ ಸಂತರನ್ನು ಮನ್ನಿಸುವ ವಿಶಾಲಭಾವ ಇರಬೇಕು."

ಆತ್ಮಾರಾಮರು ಅತಿ ನಮ್ರತೆಯಿಂದ ಮಗದೊಂದು ಪ್ರಶ್ನೆ ಕೇಳಿದರು— "ಹಿಂದೂ ಎಂದರೆ ಯಾರು ?" ಅದಕ್ಕೆ ಗುರೂಜಿಯವರ ಉತ್ತರ "**ಭಾರತೀಯ ಆಧ್ಯಾತ್ಮಿಕ ನೈತಿಕ ಮೌಲ್ಯಗಳಲ್ಲಿ ವಿಶ್ವಾಸವನ್ನಿಟ್ಟು ಓಂಕಾರ ಪ್ರಣವವನ್ನು ಮಂತ್ರದಲ್ಲಿ ಬಳಸಿಕೊಂಡು ಸಕಲ ಜೀವಾತ್ಮರಿಗೆ ಲೇಸ ಬಯಸುವವನು ಯಾವನೋ ಅವನೇ ಹಿಂದು.** ಹಿಂದೂ ಧರ್ಮವಲ್ಲ ; ಅದೊಂದು ಜನಾಂಗ. ಅದರಲ್ಲಿ ಅನೇಕ ಧರ್ಮಗಳಿವೆ. ಹಿಂದೂ ಜನಾಂಗವೆಂದರೆ ಒಂದು ತೋಟ. ಆ ತೋಟದಲ್ಲಿನ ಭಿನ್ನ ಭಿನ್ನ ಹಣ್ಣಿನ ಮರಗಳಂತೆ ಹಲವು ಧರ್ಮಗಳು ಒಂದೆಡೆ ಸೇರಿವೆ. ತೋಟವೆಂದರೆ ಹಣ್ಣಿನ ಮರವಲ್ಲ, ಹಣ್ಣಿನ ಮರಗಳನ್ನು ಒಳಗೊಂಡ ಒಂದು ಕ್ಷೇತ್ರ. ಅದರಂತೆ ಹಿಂದೂ ಎನ್ನುವುದು ಧರ್ಮವಲ್ಲ ; ಹಲವು ಧರ್ಮಗಳನ್ನು ಒಳಗೊಂಡ ಹಿಂದೂ ಜನಾಂಗವೆಂಬೊಂದು ಕ್ಷೇತ್ರ.



## ಕಲ್ಯಾಣ ಕಿರಣ

ಕಲ್ಯಾಣದಿಂದಾಯ್ತೆ ? ಈ ಕಿರಣ ದೀಪ್ತಿ ।
ಕಿರಣದಿಂದಾಯ್ತೆ ? ಈ ಕಲ್ಯಾಣ ಪ್ರಣತಿ ।
ಕಲ್ಯಾಣದೊಳ್ ಕಿರಣವೊ, ಕಿರಣದೊಳ್ ಕಲ್ಯಾಣವೊ ।
ಕಲ್ಯಾಣ-ಕಿರಣದೊಳಾವ ಮಧುರ ಸಂಬಂಧವೊ ॥ ೧ ॥

ಬೆಸೆದಿಹುದು ಯಾವಾಗೋ ಒಂದು ಕ್ಷಣದಿ ।
ಬೇರಾಗದಿಹುದದು ಯಾವ್ಯಾವ ಕ್ಷಣದಿ ।
ಹೊತ್ತಿಹುದು ಕಲ್ಯಾಣ ಕಹಳೆಯನು ಜಗದಿ ।
ಬಿತ್ತರಿಪುದದು ಆತ್ಮ ರಶ್ಮಿಯನು ಜಗದಿ ॥ ೨ ॥

ಅಣ್ಣನದಾಗಿತ್ತು ಅನವರತ ಕಲ್ಯಾಣ ।
ಅಕ್ಕನದಾಗಿತ್ತು ನಿರುತ ಜ್ಞಾನದ ಕಿರಣ ।
ಅಂದು ಇಂದಿನ ತನಕ ಬಂದಿಹುದು 'ಕಲ್ಯಾಣ ಕಿರಣ' ।
ಎಂದೆಂದಿಗೂ ದಿವ್ಯ ಸೃಷ್ಟಿಕರ್ತನ ಶ್ರೀ ಕಿರಣ ॥ ೩ ॥

**—ವಿ. ಎಸ್. ಮುಲಘಾಣ, ಮಂಟೂರ.**





## ಒಂದು ವಚನದ ತಾತ್ತ್ವಿಕ ವಿವರಣೆ

ಕಾಳಿಯ ಕಂಕಾಳದಿಂದ ಮುನ್ನ,
ತ್ರಿಪುರ ಸಂಹಾರದಿಂದ ಮುನ್ನ,
ಹರಿವಿರಂಚಿಗಳಿಂದ ಮುನ್ನ,
ಉಮೆಯ ಕಲ್ಯಾಣದಿಂದ ಮುನ್ನ,
ಮುನ್ನ ಮುನ್ನ ಮುನ್ನ,
ಅಂದಂದಿಂಗೆಳೆಯ ನೀನು : ಹಳೆಯ ನಾನು,
ಮಹಾದಾನಿ ಕೂಡಲ ಸಂಗಮ ದೇವಾ.

ಬಸವಣ್ಣನವರ ಷಟಸ್ಥಲ ವಚನಗಳು.–೨

ಅರ್ಥ :—ಶಿವನ ಇಪ್ಪತ್ತೈದು ಲೀಲೆಗಳಲ್ಲಿ ಬರುವ ಅನೇಕ ಘಟನೆಗಳಲ್ಲಿ ನಾಲ್ಕು ಘಟನೆಗಳ ಉದಾಹರಣೆ ಇಲ್ಲಿದೆ. ಮತ್ಸ್ಯಾವತಾರದಲ್ಲಿದ್ದ ವಿಷ್ಣುವನ್ನು ಕೊಂದು ಅದರ ಬೆನ್ನೆಲುಬನ್ನು ಆಯುಧವಾಗಿ ಧರಿಸಿಕೊಳ್ಳಲಿಕ್ಕೆ ಮುಂಚೆ, ತ್ರಿಪುರದ ರಾಜರಾದ ವೀರವಿದ್ಯುನ್ಮಾಲಿ, ಕಮಲಲೋಚನ, ತಾರಕಾಕ್ಷರೆಂಬ ಮೂವರು ಸಹೋದರರನ್ನು ಕೊಲ್ಲುವ ಮುನ್ನ, ಹರಿಬ್ರಹ್ಮರ ಮಧ್ಯೆ ಲಿಂಗವಾಗಿ ನಿಲ್ಲುವ ಮುನ್ನ, ಉಮೆಯ ಪತಿಯಾಗುವ ಮುನ್ನ, ನೀನು (ದೇವನು) ಅಂದಂದಿಗೆ ಎಳೆಯನು, ಚಿಕ್ಕವನು, ನಾನು (ಭಕ್ತನು) ಹಳೆಯನು, ಹಿರಿಯುವನು.

ವಿವರಣೆ :—ಇತಿಹಾಸ, ಬರವಣಿಗೆಗೆ ಸಿಕ್ಕಿದ ಮುಂಚಿನ ಕಾಲವನ್ನು ಅಳೆಯುವ ಪ್ರಯತ್ನ ಇಲ್ಲಿದೆ. ವಿದ್ಯೆ ಕಲಿಯದ ಅನೇಕರು ಮುಪ್ಪಿನವರನ್ನು ನಿಮ್ಮ ವಯಸ್ಸೆಷ್ಟು ಎಂದು ಪ್ರಶ್ನಿಸಿದರೆ "ನಾನು ಡವಗಿ ಬರ ಬಂದಾಗ ಸೀರೆ ಉಡಲಿಕ್ಕೆ ಹತ್ತಿದ್ದೆ" ಅಥವಾ "ಗುದ್ದಮ್ಮನ ಬೇನೆ ಬಂದಾಗ ದೊಡ್ಡಾಕೆ ಆಗಿದ್ದೆ" ಎಂದು ಹೇಳುವ ಪರಿಪಾಠ ವುಂಟು. ಅಂದರೆ ಅವರ ಇತಿಹಾಸಕ್ಕೆ, ಲೆಖ್ಖಕ್ಕೆ ಸಿಗದ ವಿಷಯಗಳನ್ನು ಯಾವುದಾದ ರೊಂದು ಸುಪ್ರಸಿದ್ಧ ಘಟನೆಯ ಮೂಲಕ ಹೇಳುವ ಪದ್ಧತಿ ಮತ್ತು ಪರಿಪಾಠ ಉಂಟು. ಅದೇ ರೀತಿ ಮಾನವರ ಇತಿಹಾಸಕ್ಕೆ ಮುಂಚಿನ ವಸ್ತುಸ್ಥಿತಿಯನ್ನು ಹೇಳು ವಾಗ ಇಂತಹುದೇ ಘಟನೆಗಳ ಮೂಲಕ ಹೇಳಬೇಕಾಗುತ್ತದೆ.

ಐತಿಹಾಸಿಕ ಪುರುಷನಾದ ಶಿವನು ಬಹು ಪೂರ್ವದಲ್ಲಿ ಕೆಲವು ಲೀಲೆಗಳನ್ನು ಮಾಡಿದನು. ಅದರಲ್ಲಿ ಕಂಕಾಳಧರ ಲೀಲೆ ಒಂದು. "ಭೃಗು ಮಹರ್ಷಿಯ ಶಾಪ

ದಿಂದ ವಿಷ್ಣುವು ಅನೇಕ ಅವತಾರ ತಾಳಿದನು. ಅದರಲ್ಲಿ ಮತ್ಸ್ಯಾವತಾರವು ಒಂದು. ಈ ಮೀನಿಗೆ ಒಮ್ಮೆ ಮದ ಬಂದು ಸಮುದ್ರದಲ್ಲಿ ಕ್ರೀಡಿಸಲು ತೊಡಗಿದಾಗ ತೆರೆಗಳು ವಿಪರೀತವಾಗಿ ಎದ್ದು ಜಗತ್ತು ಮುಳುಗಿ ಹೋಗುವುದೇನೋ ಎಂಬ ಭಯವಾಯಿತು. ಆಗ ಬ್ರಹ್ಮಾದಿ ದೇವತೆಗಳೆಲ್ಲ ಭಯಭೀತರಾಗಿ ಶಿವನಿಗೆ ಮೊರೆಯಿಟ್ಟರು. ಆಗ ಶಿವನು ಮೊದಲೇ ವಿಷ್ಣುವಿಗೆ ಅಭಯವಿತ್ತಂತೆ ಆ ಮೀನಿನ ಬೆನ್ನೆಲುಬು ಮುರಿದು ಅದನ್ನು ಕಂಕಾಳವೆಂಬ ಆಯುಧವನ್ನಾಗಿ ಮಾಡಿಕೊಂಡು ಮೆರೆದು ದೇವತೆಗಳಿಗೆ ಸಂತೋಷ ವನ್ನು ನೀಡಿದನು" ಎಂದು ಲಕ್ಕಣ್ಣ ದಂಡೇಶನು ಶಿವತತ್ತ್ವ ಚಿಂತಾಮಣಿಯಲ್ಲಿ ಹೇಳುವನು. ಹೀಗೆ ಶಿವನು ರೋಮಾಂಚಕಾರಿಯಾದ, ಭಯಂಕರನಾದ (ಕಾಳಿಯ) ಕಂಕಾಳಧರ ಲೀಲೆ ಮಾಡುವ ಪೂರ್ವದಲ್ಲಿ ;

ಒಂಭತ್ತನೆಯ ಲೀಲೆಯಲ್ಲಿ ತ್ರಿಪುರಗಳ ರಾಜನಾದ ತಾರಕಾಸುರನ ಮಕ್ಕಳಾದ ವೀರ ವಿದ್ಯುನ್ಮಾಲಿ, ಕಮಲಲೋಚನ, ತಾರಕಾಕ್ಷರ ಎಂಬ ಮೂವರು ದೈತ್ಯರು ವಾಸಿಸುತ್ತಿದ್ದ ಚಿನ್ನ, ಬೆಳ್ಳಿ, ಮತ್ತು ಕಾಬೋನ್ನಿನಿಂದ ಮಾಡಲ್ಪಟ್ಟ ಮೂರು ನಗರ ಗಳನ್ನು ತನ್ನ ಹಣೆಗಣ್ಣಿನಿಂದ ಸುಡುವ ಪೂರ್ವದಲ್ಲಿ ;

ನಾನು ಹೆಚ್ಚು, ತಾನು ಹೆಚ್ಚು ಎಂದು ಹರಿ–ಬ್ರಹ್ಮರು ವಾದವಿವಾದಗಳಲ್ಲಿ ತೊಡಗಿದ್ದಾಗ ಅವರ ಅಹಂಕಾರ ಮುರಿದು ಅರಿವು ಮೂಡಿಸಲು ಅವರೀರ್ವರ ಮಧ್ಯೆ ಜ್ಯೋತಿರ್ಲಿಂಗವು ಉದಯಿಸಿತು ಎಂಬ ಪ್ರತೀತಿಯುಂಟು. ಹೀಗೆ ಉದಿಸಿ ಹರಿ– ವಿರಂಚಿಗಳ ಗರ್ವಭಂಗ ಮಾಡಿದ ಇಪ್ಪತ್ತೈದನೆಯ ಲೀಲೆಗೆ ಪೂರ್ವದಲ್ಲಿ ;

ಉಮಾದೇವಿಯನ್ನು ಲಗ್ನಮಾಡಿಕೊಂಡ ಐದನೆಯ ಲೀಲೆಯ ಪೂರ್ವದಲ್ಲಿ ;

"ಇದಕ್ಕೂ ಬಹಳಷ್ಟು ಮುಂಚೆ, ಅಲ್ಲಿ ಯಾವ ಲೀಲಾ ಮೂರ್ತಿಗಳು ಇಲ್ಲದಾಗ, ಯಾವ ಘಟನೆಗಳೂ ಇಲ್ಲದಾಗ ನೀನು ಇದ್ದೆ. ನೀನು ಸ್ವಯಂಭುವಾಗಿ ನಿನ್ನಲ್ಲಿ ನೀನೇ ಇದ್ದೆ. ನಿನ್ನನ್ನು ಕುರಿತು ಹೇಳುವವರು ಯಾರೂ ಇರಲಿಲ್ಲ. ನಾನು (ಜೀವಾತ್ಮ) ನಿರಾಕಾರನಾದ ನಿನ್ನನ್ನು ಗುರುತಿಸಿ ಸೃಷ್ಟಿಕರ್ತನೆಂದು ಕರೆಯಲಿಕ್ಕೆ ಆರಂಭಿಸಿದಾಗ ನಿನಗೆ ಹೆಸರು ಬಂದಿತು. ಆದ್ದರಿಂದ ನಾನೇ ಹಿರಿಯ, ನೀನೇ ಎಳೆಯ." ಎಂದು ಬಸವಣ್ಣನವರ ಧ್ವನಿ.

ಈ ವಚನವೂ ಸಹ ಸೈದ್ಧಾಂತಿಕ ಪಾರಿಭಾಷೆಯ ವಚನ. ಭಾಷೆ, ಬರವಣಿಗೆ, ಇತಿಹಾಸಕ್ಕೆ ಪೂರ್ವದಲ್ಲಿ, ಹರಿವಿರಂಚಿಗಳ ಅಂದರೆ ಸೃಷ್ಟಿಯ ರಚನೆಯ ಪೂರ್ವ ದಲ್ಲಿ, ಉಮೆಯ ಕಲ್ಯಾಣದಿಂದ ಅಂದರೆ ಪರಶಿವನು ಶಕ್ತಿವಿಶಿಷ್ಟನಾಗಿ ಸೃಷ್ಟಿಕರ್ತ ನಾಗಲಿಕ್ಕೆ ಪೂರ್ವದಲ್ಲಿ ಉಮಾಪತಿ (ಸೃಷ್ಟಿಕರ್ತ) ಯಾಗದೆ ಸ್ವಯಂಭುವಾಗಿ, ಲೀಲಾ ವಿರಹಿತನಾಗಿ ಇದ್ದ. ಅದರಿಂದಾಗಿ ಸೃಷ್ಟಿಯಾಗಲೀ, ಸೃಷ್ಟಿಯ ಒಂದಂಗವಾದ



ಮಾನವನಾಗಲಿ ಇಲ್ಲದಿದ್ದರಿಂದ ದೇವನನ್ನು ಸೃಷ್ಟಿಕರ್ತ ಎಂದು ಕರೆಯಲಿಕ್ಕೆ ಯಾರೂ ಇರಲಿಲ್ಲ. ಮಾನವನ ಉಗಮದಿಂದಾಗಿ, ಆ ಮಾನವನು ಸೃಷ್ಟಿಯ ಲೀಲಾವೈಭವ ಗಳನ್ನರಿತು ಅದರ ಕರ್ತನನ್ನು ಹೆಸರಿಟ್ಟು ಕರೆದು ಪೂಜಿಸಲಾರಂಭಿಸಿ ಅವನಿಗೆ ಒಂದು ಬಗೆಯ "ಅಸ್ತಿತ್ವ, ವ್ಯಕ್ತಿತ್ವ"ಗಳನ್ನು ಕೊಟ್ಟನು.

ಡಾ|| ಎ. ಎನ್. ವ್ಹಾಯಿಟೆಡ್ ಹೇಳುವನು, "ಒಂದು ದೃಷ್ಟಿಯಿಂದ ದೇವರು ವಿಶ್ವವನ್ನು ಸೃಷ್ಟಿಸುತ್ತಾನೆ, ಇನ್ನೊಂದು ದೃಷ್ಟಿಯಿಂದ ವಿಶ್ವವು ದೇವರನ್ನು ಸೃಷ್ಟಿಸು ತ್ತದೆ." ಲೌಕಿಕವಾದ ತಾಯಿಯ ದೃಷ್ಟಾಂತದಿಂದ ಇದನ್ನು ಸ್ಪಷ್ಟೀಕರಿಸಬಹುದು. ತಾಯಿಯು ಮಗುವನ್ನು ಹೆರುತ್ತಾಳೆ, ಮತ್ತೊಂದು ದೃಷ್ಟಿಯಿಂದ ಮಗುವು ತಾಯಿ ಯನ್ನು ಹೆರುತ್ತದೆ. ಮಗುವಿನ ಜನನಕ್ಕೆ ಪೂರ್ವದಲ್ಲಿ ಆಕೆಯು ತಾಯಿಯೆನ್ನಿಸಿ ಕೊಳ್ಳದೆ ಕನ್ಯೆಯಾಗಿ ಇದ್ದಳು. ಇಂತಹ ಕನ್ಯೆಗೆ ತಾಯ್ತನ ತಂದುಕೊಟ್ಟುದು ಮಗು ವಲ್ಲವೇ ? ಕನ್ಯೆ ತಾಯಿಯಾಗದೆ ಇದ್ದಂತೆ ದೇವರೂ ಸಹ ಸೃಷ್ಟಿಕರ್ತನಾಗದೆ ಇದ್ದ, ಮಗುವಿನ ಬರುವು ತಾಯ್ತನದ ಬಿರುದು ನೀಡಿದಂತೆ ಸೃಷ್ಟಿಯ ರಚನೆ ದೇವನಿಗೆ ಕರ್ತೃತ್ವದ ಬಿರುದು ಕೊಡುತ್ತದೆ. ಈ ದೃಷ್ಟಿಯಿಂದ ತಾಯಿ ಕಿರಿಯಳು, ಮಗುವೇ ಹಿರಿಯದು. ಅದೇ ರೀತಿಯಲ್ಲಿ ಅಸ್ತಿತ್ವದ ದೃಷ್ಟಿಯಿಂದ (Ontologically) ದೇವನು ಹಿರಿಯನಾದರೂ ಹೆಸರಿಟ್ಟು ಕರೆದು, ಬಿರುದು ನೀಡುವವರಿಲ್ಲವಾದ ಕಾರಣ ಅವನು ಕಿರಿಯನು. ಇಂತಹ ದೇವನನ್ನು ಹೆಸರಿಟ್ಟು ಕರೆದ ಭಕ್ತನು ಅರಿಯುವಿಕೆಯ ದೃಷ್ಟಿಯಿಂದ (Epistemologically) ಹಿರಿಯನೇ ಅಹುದು. ಹೀಗೆ ದೇವ ಭಕ್ತರ ಲೀಲೆಯಲ್ಲಿ ದೇವನು ಎಳೆಯ, ಭಕ್ತನು ಹಳೆಯ. ಭಕ್ತನ ಅಸ್ತಿತ್ವದ ನಂತರವೇ ಅವನ ಅಸ್ತಿತ್ವವು. ಪರಮಾತ್ಮ ಭಾವನೆ, ಭಾಷೆಗಳಿಗೆ ಸಿಕ್ಕದ್ದು ಭಕ್ತನ ಅಸ್ತಿತ್ವದ ನಂತರವಷ್ಟೇ.

ಇಷ್ಟು ಹೇಳಿದ ಬಸವಣ್ಣನವರು 'ಮಹಾದಾನಿ' ಕೂಡಲ ಸಂಗಮ ದೇವಾ ಎಂಬ ಗುಣವಾಚಕ ಶಬ್ದವನ್ನು ಬಳಸುತ್ತಾರೆ. ಅದರರ್ಥ, ನೀನು ಎಳೆಯ, ನಾನು ಹಳೆಯ ಎಂಬ ಮಾತನ್ನು ಒತ್ತಿ ಹೇಳುವಲ್ಲಿ ವಿನಯ, ಶರಣಾಗತಿಯುಂಟೇ ವಿನಾ ಅಹಂಕಾರವಿಲ್ಲ. ಭಕ್ತನನ್ನು ಹಳೆಯನನ್ನಾಗಿ ಮಾಡಿದುದು ದೇವನ ಔದಾರ್ಯವಲ್ಲವೆ? ಮಗುವನ್ನು ಹೆತ್ತು, ಅದನ್ನು ತಾಯ್ತನದ ಮೂಲಿಗನನ್ನಾಗಿ ಮಾಡಿದುದು ತಾಯಿಯ ಔದಾರ್ಯವಷ್ಟೇ. ಮಕ್ಕಳೊಡನೆ ಕಣ್ಣು ಮುಚ್ಚಾಲೆಯಾಡುತ್ತ ಮುಟ್ಟಿಸಿಕೊಂಡು ಸೋಲುವ ತಾಯಿಯ ಔದಾರ್ಯದಂತೆ ದೇವನ ಔದಾರ್ಯವೂ ಸಹ. ತಾನೇ ಸೃಷ್ಟಿಸಿದ ಜೀವಾತ್ಮನಿಗೆ, ಭಕ್ತನಿಗೆ ಸೋಲುವ ಔದಾರ್ಯ. ಆದ್ದರಿಂದ ಅವನು ಮಹಾದಾನಿ. ಈ ಪದವನ್ನು ಬಳಸುವಲ್ಲಿ ಬಸವಣ್ಣನವರ ಹೃದಯದಲ್ಲಿ ಕೃತಜ್ಞತೆ ಮಿಡಿಯುತ್ತಿದೆ.

ಈ ವಚನವು ಸೈದ್ಧಾಂತಿಕವಾಗಿ, ದಾರ್ಶನಿಕವಾಗಿ, ಸಾಹಿತ್ಯಿಕವಾಗಿ ಮಹತ್ವ ಉಳ್ಳದು. ಸೈದ್ಧಾಂತಿಕವಾಗಿ ಸ್ವಯಂಭುವಿನ ಇರುಹನ್ನು, ಅವನು ಲೀಲೆಗೊಳಗಾದುದನ್ನು ಸೂಚಿಸಿದರೆ, ದಾರ್ಶನಿಕವಾಗಿ ' ಮಹಾದಾನಿ ' ಎಂಬೊಂದು ಪದದಿಂದ ದೇವ-ಭಕ್ತರ ಮಧುರ ಸಂಬಂಧವನ್ನು ಸೂಚಿಸುತ್ತದೆ. ಪ್ರತಿ ವಾಕ್ಯದ ಕೊನೆಗೆ ಬರುವ 'ಮುನ್ನ' ಪದವು ವಚನಕ್ಕೆ ಕಾವ್ಯದ ಛಾಯೆಯನ್ನು, ಲಯವನ್ನು ತಂದುಕೊಡುತ್ತದೆ. ಸಮಮಾತ್ರೆ, ಸಮಗಾತ್ರದಿಂದಾಗಿ ಸುಮಧುರ ಭಾವಗೀತೆಯಾಗುತ್ತದೆ.

ಈ ವಚನವು ಪಿಂಡಜ್ಞಾನ ಸ್ಥಲದಲ್ಲಿ ವಿಂಗಡಿಸಲ್ಪಟ್ಟಿದೆ. ಪಿಂಡಸ್ಥಲದಲ್ಲಿ ನಾನಾರು ಎಂದು ಪ್ರಶ್ನಿಸಿ, ' ನಾನು ದೇಹವಲ್ಲ, ಆತ್ಮ ಅರ್ಥಾತ್ ಪಿಂಡ ' ಎಂಬ ಬೌದ್ಧಿಕ ಅರಿವಾದ ಬಳಿಕ, "ಈ ಆತ್ಮ (ಅಂಶರೂಪಿ)ನಿಗೂ ಮತ್ತು ಪರಮಾತ್ಮನಿಗೂ ಇರುವ ಸಂಬಂಧವೇನು ? ಎಂದು ಜಿಜ್ಞಾಸುವು ಆಲೋಚಿಸ ತೊಡಗುವನು. ಅವರಿಬ್ಬರ ಸಂಬಂಧ, ಸ್ವರೂಪಗಳ ಚಿಂತನೆ ಮಾಡುವಾಗ ಪಿಂಡಜ್ಞಾನ ಸ್ಥಲದಲ್ಲಿ ನಿಲ್ಲುವನು. ಈ ಸ್ಥಲದಲ್ಲಿಯೇ ಬಹಳಷ್ಟು ಸಿದ್ಧಾಂತದ ಚರ್ಚೆಯಾಗುವುದು. ವಿಶ್ವದ ನಿರ್ಮಾಣ (Cosmology), ಜಗತ್ತಿನಲ್ಲಿ ದೇವನ ಪಾತ್ರ, ದೇವ-ಜಗತ್ತಿನ ಸಂಬಂಧ ಮುಂತಾದ ಸೈದ್ಧಾಂತಿಕ ವಿಚಾರಗಳು ಪಿಂಡಜ್ಞಾನ ಸ್ಥಲದಲ್ಲಿ ಆಲೋಚಿಸಲ್ಪಡುತ್ತವೆ. ಒಂದು ಹಲವಾದ ಬಗೆ, ಮತ್ತು ಉದ್ದೇಶ, ಒಂದು ಇಳಿದು ಬಂದು ವಿಶ್ವದಲ್ಲಿ ಮೈಗೂಡುವ ರೀತಿಗಳನ್ನು ಚಿಂತನೆ ಮಾಡುವುದೇ ಪಿಂಡಜ್ಞಾನ ಸ್ಥಲದಲ್ಲಿ.

ಪ್ರಸ್ತುತ ವಚನದಲ್ಲಿ ಬರುವ "ಅಂದಿಂಗೆಳೆಯ ನೀನು ಹಳೆಯ ನಾನು" ಎಂಬುದನ್ನು ಇನ್ನೊಂದೂ ಅರ್ಥದಲ್ಲಿ ವಿವೇಚಿಸಬಹುದು. ಸೃಷ್ಟಿಯು ರಚನೆಯಾಗಿ, ಅಳಿದು ಪ್ರತಿಸಲ ರೂಪಗೊಂಡಾಗ ಸೃಷ್ಟಿಕರ್ತನು (ಶಕ್ತಿ ತತ್ತ್ವ) ಮತ್ತೆ ಮತ್ತೆ ಹೆಸರು ತಾಳುವನು. ಉದಾಹರಣೆಗೆ—ತಾತ್ಕಾಲಿಕ ನೌಕರಿಗೆ ಸೇರಿದಾಗ ಪ್ರತಿ ವರ್ಷದ ಕೊನೆಗೆ ಶಿಕ್ಷಕನನ್ನು ನಿವೃತ್ತಗೊಳಿಸುತ್ತಾರೆ. ಮರುವರ್ಷ ಸೇರಿದಾಗ ಅವನ ಕಾಲಾವಧಿ ಹೊಸದಾಗಿ ಆರಂಭವಾಗುವುದು. ಸೃಷ್ಟಿಕರ್ತನ ಅಭಿದಾನವು ಪ್ರತಿಸೃಷ್ಟಿಗೆ ಹೊಸದಾದರೂ ಎಲ್ಲದರ ನಡುವೆ ಓತಪ್ರೋತವಾಗಿ, ಅವ್ಯಾಹತವಾಗಿ ಹರಿಯುವ ಆತ್ಮತತ್ತ್ವ (ಶಿವ ತತ್ತ್ವ) ಹಳೆಯದೇ ಇರುತ್ತದೆ. ಆತ್ಮನ ಹಳೆಯತನ ಕಣ್ಗೆ ತೋರುವ ಸೃಷ್ಟಿಯ ರಚನೆಗಿಂತಲೂ ಹಳೆಯದು. ಹೀಗೆ ಸೃಷ್ಟಿಗತೀತ ಆತ್ಮ ಹಳೆಯದು ; ಸೃಷ್ಟಿಯೊಳಗೆ ಸಿಕ್ಕುವ ಪರಮಾತ್ಮ (ಶಕ್ತಿಯುಕ್ತ) ಎಳೆಯದು.

ಈ ನಿರೂಪಣೆ ಅಷ್ಟೊಂದು ತೃಪ್ತಿಕಾರಕ ಎನ್ನಿಸದು ; ಮೊದಲಿನದು ಕೊಂಚ ಸಮಾಧಾನ ನೀಡುತ್ತದೆ.





ಬೋಳು ಬಸವನ ಬೊಂತೆ—೨

## ಲೋಕದಾಟ

ಉತ್ತಮೋತ್ತಮನಾದ ಸಾಕ್ರಟೀಸ್ ವಿಷಗುಡಿದ
ಮಿತ್ತನಪ್ಪಿದನೇಸು ಶಿಲುಬೆಗೇರಿ
ಸತ್ತನಯ್ಯೋ ಗಾಂಧಿ ಗುಂಡಿನೇಟಿಗೆ ಬಿದ್ದು
ಉತ್ತಮರಿಗೀ ಸಾವೆ— ಬೋಳುಬಸವ ॥೧॥

ಹತ್ತು ಮಕ್ಕಳ ಹೆತ್ತು ಹೊತ್ತು ಪೊರೆವಳು ತಾಯಿ
ಮುತ್ತು ಮಾಣಿಕವೆಂದು ಮುದದಿ ಪಾಡಿ
ಹತ್ತು ಜನರೂ ಕೂಡಿ ಕೊನೆಗವಳ ಪೊರೆಯಲ್ಕೆ
ಅತ್ತು ಗೋಳಾಡುವರು— ಬೋಳುಬಸವ ॥೨॥

ಕಲಿಸಿದಂ ಗುರುಬಡಿದು ಬುದ್ಧಿಯನು ಕೃತಯುಗದಿ
ಬಲುಬೈದು ತ್ರೇತೆಯೊಳು ಭಂಗಪಡಿಸಿ
ಕಲಿಸಿದಂ ದ್ವಾಪರದಿ ಬೆದರಿಸುತೆ ಮೆದುವಾಗಿ
ಕಲಿಯುಗದಿ ಕೈಮುಗಿದು— ಬೋಳುಬಸವ ॥೩॥

ಸೊಗವಿಲ್ಲ ಸರ್ವರನು ಸೊಗದಲಿಡುವಾತಂಗೆ
ನಗುವಿಲ್ಲ ಜೀವನದಿ ನಗಿಸುವವಗೆ
ಮಿಗೆಕರೆವ ಗೋವ್ಗಿಲ್ಲ ತುಪ್ಪದಿನಿರಸಗಂಪು
ಜಗದಾಟ ಬಹುಚೋದ್ಯ— ಬೋಳುಬಸವ ॥೪॥

ಮಡೆಯಗುತ್ತಮನಾರಿ ಗುಣಶಾಲಿಗತಿ ಮೂರ್ಖ
ಜಡಮತಿಗೆ ಚುರುಕಾದ ಚಂಚಲಾಕ್ಷಿ
ತುಡುಗುಣಿಗೆ ಗಂಭೀರೆ ಮಾನಿಷ್ಠನಿಗೆ ಜಾರೆ
ಜಡಜಭವನಾಟವಿದು— ಬೋಳುಬಸವ ॥೫॥

ಸಿರಿಯಿರಲು ಗುಣವಿರದು ಗುಣವಿರಲು ಸಿರಿಯಿರದು
ಎರಡುಮಿರಲಾರೋಗ್ಯವಿರದು ನರಗೆ
ಇರಲೆಲ್ಲವನುಭವಿಸಿ ಆಯುಷ್ಯವೇ ಇರದು
ನರನಿಗೇಕೀ ರೀತಿ— ಬೋಳುಬಸವ ॥೬॥

ನಗುತಲೇ ಜನಿಸಿ ನಗುನಗುತಲಳಿವರು ಕೆಲರು
ನಗುತುದಿಸಿ ಕೊನೆಗಳುತಳಿವರು ಕೆಲರು
ಜಗಕೆ ಬಂದಳಿವನಕ ಗೋಳಾಡುವರು ಕೆಲರು
ಜಗದೊಳಿಂತೇಕಿಹುದು— ಬೋಳುಬಸವ ॥೭॥

ಕುಲವಿದ್ಯೆವಿನಯವನು ಸೌಂದರ್ಯಶೀಲವನು
ಬಲ ಧೈರ್ಯ ಯೌವ್ವನವು ಸಾಹಸವನು
ಸಲೆನೋಡಿ ಬಲುಮೆಚ್ಚಿ ದಾರಿದ್ರ್ಯಕನ್ಯೆಯನು
ಜಲ ಜಭವನೀಯುವನು— ಬೋಳುಬಸವ ॥೮॥

ಕೊಡಲಿಚ್ಛಿಪಾತಂಗೆ ದಟ್ಟದಾರಿದ್ರ್ಯವನು
ಕಡುಲೋಭಿಗತುಳ ಧನಕನಕವನು
ಜಡಗೆ ದೀರ್ಘಾಯುವನು ಸುಕೃತಿಗಲ್ಪಾಯುವನು
ಕೊಡುತಿಹನು ವಿಧಿಯೇಕೆ— ಬೋಳುಬಸವ ॥೯॥

ಭೂರಿಭೋಜನ ನಡೆಸೆ ಸೇರುವರು ಬಂಧುಗಳು
ಸಾರಸಕ್ಕರೆಗಿರುವೆ ಮುತ್ತುವಂತೆ
ತೀರಿ ಧನಧಾನ್ಯ ನೀ ಗತಿಗೆಟ್ಟು ಹೋದಾಗ
ದೂರ ಪೋಪರು ಹೇಸಿ— ಬೋಳುಬಸವ ॥೧೦॥

ಆನೆಯಂ ಜಗ್ಗುವುದು ನೀರಿನೊಳಗಣ ಮೊಸಳೆ
ಶ್ವಾನವೂ ಲೆಕ್ಕಿಸದು ನೆಲದೊಳದನು
ಮಾನಿಸುವ ಮಂತ್ರಿಯನು ಕೆಳಗಿಳಿಯಲಳಿಯುವರು
ಸ್ಥಾನಬಲವಂತಹುದು— ಬೋಳುಬಸವ ॥೧೧॥

ಪಿಳ್ಳೆ ಮಗುವಿನ ಅಳ್ಳೆ ತುಂಬಿಸಲು ಗತಿಯಿರದೆ
ಪೊಳ್ಳುಪುರಿ ಕಳೆ ಕಳ್ಳನಿವನೆಂಬರು
ಕಳ್ಳತನದಲಿ ಕೋಟಿಕೊಳ್ಳೆಹೊಡಿವಂಥವನ
ಒಳ್ಳೆಯವನೆಂಬರ್ಕೆ— ಬೋಳುಬಸವ ॥೧೨॥

ಪಿ. ಬಸವಣ್ಣ.
ಅಡ್ವೊಕೇಟ್ ಕೊಳ್ಳೇಗಾಲ

---

"ಕಣ್ಣುಗಳು ತಮ್ಮನ್ನು ನಂಬುತ್ತವೆ,
ಕಿವಿಗಳು ಇತರರನ್ನು ನಂಬುತ್ತವೆ." —ಜರ್ಮನ್ ಗಾದೆ.



## ಮಲೆನಾಡನ್ನೆಲ್ಲ ಒಂದು ರಾಜ್ಯವನ್ನಾಗಿ ಸಂಘಟಿಸಿ ಆಳಿದ

# ಶಿಸ್ತಿನ ಶೂರ ಶಿವಪ್ಪನಾಯಕ

—ಭೂಪಾಳಂ ಚಂದ್ರಶೇಖರಯ್ಯ.
ಮಲೆನಾಡು ವಾರ್ತಾ ಸಂಪಾದಕರು.

[ವೀರಶೈವ ಧರ್ಮವನ್ನು ಸ್ವೀಕರಿಸಿ, ಪಾಲಿಸಿ ಪರಧರ್ಮ ಸಹಿಷ್ಣುವಾಗಿ ಕುಲೋತ್ತುಂಗನಾಗಿ ಮೆರೆದ ವೀರಾಗ್ರಣಿ ಶಿವಪ್ಪನಾಯಕ. ರಾಜಾಶ್ವವನ್ನೇರಿ ಧೈರ್ಯ-ಸ್ಥೈರ್ಯಗಳು ಮೂರ್ತಿಗೊಂಡಂತೆ ಎದೆಯುಬ್ಬಿಸಿ, ಧರ್ಮನಿಷ್ಠೆಯ ಸಂಕೇತವಾದ ಇಷ್ಟಲಿಂಗ ಸಮೇತ ಕರಡಿಗೆಯನ್ನು ಹಾಕಿಕೊಂಡು, ಮಾರ್ದವತೆ-ವಾತ್ಸಲ್ಯ ತುಂಬಿದ ಕಣ್ನೋಟ ಹರಿಸುವ ಸುಂದರಾಂಗ ಶಿವಪ್ಪನಾಯಕನ ಧೈರ್ಯ-ಧರ್ಮನಿಷ್ಠೆ-ಪ್ರಜಾನುರಾಗದ ಪ್ರತಿಮೂರ್ತಿಯಾಗಿದೆ ಶಿವಮೊಗ್ಗೆಯ ಪುರಸಭೆಯವರು ಪ್ರತಿಷ್ಠಾಪಿಸಿರುವ ಅಶ್ವಾರೂಢ ಪ್ರತಿಮೆ. ಸುಪ್ರಭಾತದ ರವಿಯು ಹೊಂಗಿರಣಗಳಲ್ಲಿ ಈ ಪ್ರತಿಮೆಯನ್ನು ಮೀಯಿಸುವಾಗ ದಿಟ್ಟಿ ಲೀನವಾಗಿ ಅಮರ್ತ್ಯಭಾವವೊಂದು ನಮ್ಮನ್ನು ಬಳಸುತ್ತದೆ. ಇಂಥ ಮಹಾಪುರುಷನ ಕಾರ್ಯಸಾಧನೆಗಳ ಸಂಕ್ಷಿಪ್ತ ಪರಿಚಯವಿಲ್ಲಿದೆ.]
—ಸಂ.

ವಿಜಯನಗರದ ಪತನಾನಂತರ ಮಲೆನಾಡನ್ನೆಲ್ಲ ಏಕಪ್ರಭುತ್ವದಲ್ಲಿ ತಂದು ಅದನ್ನು ಶಕ್ತಿಶಾಲಿಯಾದ ರಾಜ್ಯವನ್ನಾಗಿ ಮಾಡಿ ಸುಮಾರು ಇನ್ನೂರೈವತ್ತು ವರ್ಷಕಾಲ ವೈಭವದಿಂದ ಕಂಗೊಳಿಸುವಂತೆ ಮಾಡಿದ ಕೀರ್ತಿ ಕೆಳದಿಯ ನಾಯಕರದಾಗಿತ್ತು. ಅವರಲ್ಲಿ ಉಜ್ವಲ ಶಿವಭಕ್ತನೂ, ರಾಷ್ಟ್ರಭಕ್ತನೂ, ವೀರಾಧಿವೀರನೂ, ಶತ್ರು ಭಯಂಕರನೂ, ಧರ್ಮಾತ್ಮನೂ, ಪ್ರಜಾಪರಿಪಾಲಕನೂ ಆಗಿ ಪ್ರಖ್ಯಾತಿ ಪಡೆದ ಶಿಸ್ತಿನ ಶಿವಪ್ಪನಾಯಕನ ಕಾಲ ಅತಿ ಮುಖ್ಯವಾದದ್ದು.

ಅವನ ಪ್ರತಿಮೆಯ ಚಿತ್ರವು ಮುಖಚಿತ್ರವಾಗಿ ಈ ಸಂಚಿಕೆಯನ್ನು ಅಲಂಕರಿಸಿದೆ. ಸಮರಾಂಗಣಕ್ಕಭಿಮುಖನಾದ ಅಶ್ವಾರೋಹಿ, ರಣಧೀರನಾಯಕನ ವೀರ ಸುಂದರ ಪ್ರತಿಮೆಯನ್ನು ಶಿವಮೊಗ್ಗ ನಗರದ ಮಧ್ಯಭಾಗದಲ್ಲಿ ನಗರದ ಅತ್ಯುನ್ನತ ಪ್ರದೇಶದಲ್ಲಿ ಸಂಸ್ಥಾಪಿಸಿದ್ದಾರೆ. ೧೬೪೬ರಿಂದ ೧೬೬೧ರ ವರೆಗೆ ಆಳಿದ ಶಿಸ್ತಿನ ವೀರ ಮಹಾದ್ಭುತ

ಪರಾಕ್ರಮಿ ಶಿವಪ್ಪನಾಯಕನ ಆಳ್ವಿಕೆಯ ಪ್ರಧಾನ ಅಂಶಗಳನ್ನು ಪ್ರಸ್ತುತ ಲೇಖನದಲ್ಲಿ ವಿವರಿಸುವ ಅಪೇಕ್ಷೆ ನನಗಿದೆ.

ಕರೆಯುವನಿಗೆ ಬಾಧಕರಾ |
ಗಿರುವ ಪರಂಗಿಗಳ ಬಲವನುಡುಗಿಸಿ ಕುಂದಾ ||
ಪುರ ಗಂಗುವಳ್ಳಿ ಹೊನ್ನಾ
ವರಗಳ ಕೋಂಟೆಗಳನಾ ನೃಪಂ ವಶಗೈದಂ ||

ಕಂಗೊಳಿಪ ಮಂಗಲೂರು–
ತ್ತುಂಗ ಪರಿಸ್ತರಣಮಂ ವಶಂಗೈದು ಬಳಿ
ಕ್ಕಿಂಗರೀಜಾದ್ಯ ರಾಗಮು
ನ್ನಂಗಳುಮಂ ತವಿಸಿ ರಾಜ್ಯಮಂ ಬಾಳಿಸಿದಂ ||

ಬಳಿಕುರು ನೀಲೇಶ್ವರದು
ಜ್ವ ಳಿಪೆಳಿಯುಂ ಕೊಂಡು ನಾಯಿಮಾರರ ನೆಲದೊಳ್
ತೊಲಗದ ಕಂಬವನನುವಿಂ
ನಿಲಿಸಿ ಮಹಾದ್ಭುತ ಪರಾಕ್ರಮುವನುರೆ ಮೆರೆದಂ ||

ಹೀಗೆ ಕರಾವಳಿ ಪ್ರದೇಶದಲ್ಲಿ ಅಂದರೆ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿ ಪೋರ್ಚುಗೀಸರ ಮತ್ತು ಇಂಗ್ಲಿಷಿನವರ ಬಲವನ್ನುಡುಗಿಸಿದ್ದಲ್ಲದೆ ಕಾಸರಗೋಡಿನಿಂದ ದಕ್ಷಿಣಕ್ಕೆ ನೀಲೇಶ್ವರದವರೆಗೆ ರಾಜ್ಯ ವಿಸ್ತರಿಸಿ ಜಯಸ್ತಂಭ (ತೊಲಗದಕಂಭ) ಸಂಸ್ಥಾಪನೆ ಮಾಡಿದವನು ಶಿವಪ್ಪನಾಯಕ. ಶಿವಮೊಗ್ಗ ಜಿಲ್ಲೆಯ ಬಿದನೂರು (ನಗರ) ಇವನ ರಾಜಧಾನಿಯಾಗಿತ್ತು.

## ಔಚಿತ್ಯ

ಶಿವಮೊಗ್ಗ ನಗರದಲ್ಲಿ ಶಿವಪ್ಪನಾಯಕನ ಪ್ರತಿಮೆ ಸಂಸ್ಥಾಪಿಸಿದ ಔಚಿತ್ಯವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳುವುದು ಯುಕ್ತವಿದೆ. ಶಿವಮೊಗ್ಗ ಕೆಳದಿ ನಾಯಕರ ರಾಜ್ಯಕ್ಕೆ ಹೆಬ್ಬಾಗಿಲಾಗಿತ್ತು. ಇಲ್ಲಿ ಒಂದು ಸಣ್ಣ ಕೋಟೆಯೂ ಇತ್ತು. ಬಿಜಾಪುರದ ಸೈನ್ಯ ಬಂದು ಕೋಟೆಯನ್ನು ಆಕ್ರಮಿಸಿದಾಗ ಶಿವಪ್ಪನಾಯಕನು ಅಪಾರವಾದ ಸೈನ್ಯವನ್ನುತಂದು ಶತ್ರು ಸೈನ್ಯವನ್ನು ಸದೆಬಡಿದೋಡಿಸಿ ಮುತ್ತಿಗೆ ತೆಗೆಸಿದನು. "ಶಿವ(ಮೊಗ)ಮುಖಾ" ಎಂದರೆ ಶಿವರಾಜ್ಯದ (ಕೆಳದಿ ರಾಜ್ಯದ ಅಥವಾ ನಗರ ಸಂಸ್ಥಾನದ ಇನ್ನೊಂದು ಹೆಸರು) ದ್ವಾರಪ್ರದೇಶವಾಗಿತ್ತು. ಇಲ್ಲಿ ತುಂಗಾ ತೀರದಲ್ಲಿರುವ ಭೀಮೇಶ್ವರ ದೇವಾಲಯ, ಆಂಜನೇಯಸ್ವಾಮಿ ದೇವಾಲಯಗಳ ಪಕ್ಕದಲ್ಲಿ ಶಿವಪ್ಪ



ನಾಯಕನ ಅರಮನೆ ಕಟ್ಟಡ ಈಗಲೂ ಇದೆ. ಮೂರಂತಸ್ತಿನ ಕಟ್ಟಡದಲ್ಲಿ ಅಷ್ಟು ಎತ್ತರದ ತೇಗದ ಮರದ ಕಂಭಗಳು ಮೂರುನೂರು ವರ್ಷಗಳಾದರೂ ಇನ್ನೂ ಗಟ್ಟಿಯಾಗಿಯೇ ನಿಂತಿವೆ. ಅಂತಹ ಮರಗಳೇ ಈಗ ಮಲೆನಾಡಿನಲ್ಲಿ ಎಲ್ಲಿಯೂ ಸಿಗುವುದಿಲ್ಲ. ಈ ಅರಮನೆಯ ಮಹಡಿಯ ಮೇಲೆ ಶಿವಪ್ಪನಾಯಕನ ದರ್ಬಾರ್ ಮಹಲು (Durbar Hall) ಇದ್ದಿತು. ಅಲ್ಲಿ ಆ ಕಾಲದ ಸಿಂಹಾಸನ ಮತ್ತು ಕುರ್ಚಿಗಳಿದ್ದವು. (ಅವೆಲ್ಲ, ಅರಣ್ಯ ಶಾಖೆಯವರ ಸ್ವಾಧೀನಕ್ಕೆ ಈ ಭವನ ಬಂದ ಮೇಲೆ, ಎಲ್ಲಿಯೋ ಮಾಯವಾಗಿವೆ. "ಶಿವಪ್ಪನಾಯಕನ ದರ್ಬಾರ್‌ಭವನ" ಎಂಬ ಫಲಕವೂ ಅಲ್ಲಿರುವುದಿಲ್ಲ.)

## ಶಿಸ್ತಿನ ಶಿವಪ್ಪನಾಯಕ

ಶಿಸ್ತಿನ ಶಿವಪ್ಪನಾಯಕ–ಎಂಬ ನಾಣ್ನುಡಿ ಇಂದಿಗೂ ನಿಂತಿದೆ. ಜಮೀನು ಕಂದಾಯ ಆ ಕಾಲದಲ್ಲಿ ಧಾನ್ಯ ರೂಪದಲ್ಲಿ ವಸೂಲಾಗುತ್ತಿದ್ದಿತು. ಬೆಳೆದ ಧಾನ್ಯದಲ್ಲಿ ಆರರಲ್ಲಿ ಒಂದುಪಾಲು ಸರ್ಕಾರಕ್ಕೆ ಸೇರುತ್ತಿತ್ತು. ಆದರೆ ಯಾವ ಯಾವ ಜಮೀನಿನಲ್ಲಿ ಎಷ್ಟೆಷ್ಟು ಬೆಳೆಯಾಗುತ್ತದೆ ಎಂಬುದು ಕಂಡುಹಿಡಿಯುವುದು ಹೇಗೆ? ಇದಕ್ಕಾಗಿ ಶಿವಪ್ಪನಾಯಕನು ಪ್ರತಿಗ್ರಾಮದ ಪ್ರತಿಜಮೀನಿನ ವಿಂಗಡಣೆ ಮಾಡಿಸಿದ. ತರಿ, ಖುಷ್ಕಿ, ಬಾಗಾಯ್ತು, ಇದು ಬೆಳೆ ವಿಂಗಡಣೆಯಾದರೆ ಮಣ್ಣಿನಗುಣ ಅನುಸರಿಸಿ ಉತ್ತಮ, ಮಧ್ಯಮ, ಕನಿಷ್ಟ ಎಂದು ವಿಂಗಡಿಸಿದ. ಅರಮನೆಯಿಂದ ಸಿಬ್ಬಂದಿ ಕಳಿಸಿ ಬೇರೆಬೇರೆ ಜಮೀನುಗಳಲ್ಲಿ ಬೆಳೆಹಾಕಿಸಿ ಮೂರು ಮೂರು ವರ್ಷಗಳ ಸರಾಸರಿ ಲೆಖ್ಖ ಹಾಕಿಸಿದ. ಆಮೇಲೆ ಮಳೆ, ಕೆರೆ ಆಶ್ರಯ ಈ ಮುಂತಾದ ಭೇದಗಳನ್ನು ಗಣನೆಗೆ ತೆಗೆದುಕೊಳ್ಳುವಂತೆ ಮಾಡಿದ. ಅವನ ಕಾಲದ ವಿಂಗಡಣೆಯಂತೆ ಜಮೀನಿನ ಫಸಲು ಇಳುವರಿ ಗುಣಮಟ್ಟದ ಲೆಖ್ಖದ ಆಣೆವಾರಿಯೂ ಸೇರಿ ಒಟ್ಟು ಇಪ್ಪತ್ತೇಳು ವರ್ಗಗಳಾಗಿ ವಿಂಗಡಣೆಯಾಗಿದ್ದವು. ಹೀಗೆ ವಿಂಗಡಿಸಿ ಕಂದಾಯ ನಿರ್ಧಾರವಾಗಿ ರೈತರಿಗೂ ತೃಪ್ತಿಯಾಯಿತು. ಆಯಾರೈತರ ಜಮೀನಿಗೆ ಹದ್ದುಬಸ್ತು ಮಾಡಿಸಿ ಲಿಂಗಮುದ್ರೆ ಕಲ್ಲುಗಳನ್ನು ನಡಿಸಿದ. ಶಿಸ್ತೆಂದರೆ ಶಿವಪ್ಪನಾಯಕನ ಶಿಸ್ತು–ಎಂಬುದು ಗಾದೆಯ ಮಾತಾಗಿಯೂ ನಿಂತಿತು. ಈಗಲೂ ರೈತರಲ್ಲಿ ಗಾದೆಯಿದೆ: "ಶಿವಪ್ಪ ನಾಯಕನ ಶಿಸ್ತು, ಬಲ್ಲಾಳರಾಯನ ಹದ್ದುಬಸ್ತು". (ಶಿವಪ್ಪನಾಯಕ ಆಳಿದ್ದು ಶಿವಮೊಗ್ಗ ಜಿಲ್ಲೆಯಿಂದ, ಬಲ್ಲಾಳರಾಯ ಆಳಿದ್ದು ಹಾಸನ ಜಿಲ್ಲೆಯಿಂದ. ಇವರ ಕಾಲಗಳು ಬೇರೆಬೇರೆ.)

## ಒಂದು ಗೋಪಾದದ ಭೂಮಿಯೂ ಬಂಜರು ಬೀಳಬಾರದು

ರೈತರಿಗೆ ಬೀಜ ಮತ್ತು ಮೂಲಧನಗಳನ್ನು ಕೊಟ್ಟು ಉಳುಮೆಗೆ ಸಹಾಯಮಾಡಿ ಗೋಮಾಳಗಳನ್ನು ವಿಂಗಡಿಸಿಕೊಟ್ಟು ಒಂದು ಗೋಪಾದದಷ್ಟು ಭೂಮಿ ಸಹ ಬೀಳು

ಬೀಳದಂತೆ ಕಟ್ಟಾಜ್ಞೆ ಮಾಡಿದ್ದ. ಹದಬಿದ್ದ ಒಡನೆ ಆಯಾ ಗ್ರಾಮದ ಪಟೇಲ ಡಂಗುರ ಹೊಡಿಸಿದ ಕೂಡಲೆ ಎಲ್ಲ ರೈತರೂ ಎತ್ತುಗಳನ್ನು ಒಯ್ದು ತಮ್ಮ ತಮ್ಮ ಜಮೀನಿನಲ್ಲಿ ಉಳುಮೆ ಮಾಡುತ್ತಿದ್ದರು, ಬಿತ್ತುತ್ತಲಿದ್ದರು. ಕೆರೆ ಕಾಲುವೆಗಳನ್ನು ಕಟ್ಟಿಸಿ ಬೇಸಾಯಕ್ಕೆ ನೀರೊದಗುವಂತೆ ಮಾಡುತ್ತಿದ್ದ. ಮನೆಗೊಬ್ಬರಂತೆ ಜನರು ಬಂದು ಗ್ರಾಮಕ್ಕೆ ಸಂಬಂಧಪಟ್ಟ ಕೆಲಸಗಳನ್ನು ಮಾಡಬೇಕೆಂಬ ಕಟ್ಟಾಜ್ಞೆಯಿತ್ತು. ಪ್ರಜೆಗಳ ಬಿನ್ನಪಗಳನ್ನು ಆದರದಿಂದ ಸ್ವತಃ ಲಾಲಿಸಿ ತೀರ್ಮಾನ ಮಾಡುತ್ತಲಿದ್ದ.

ಪ್ರಜೆಗಳುಸಿರ್ವ ಬಿನ್ನಪವನಾಲಿಸಿಯೊಳ್ಗಿರೆ ಕಾಳ್ಪುರಗಳಂ ।
ಸೃಜಿಯಿಸಿ ಪೇಣವರ್ಗೆಕರಮೂಲಧನಂಗಳನಿತ್ತು ಬಿತ್ತುವಮಂ ।
ನಿಜಮೆನಲಿತ್ತು ಗೋಪ್ಪದವನಿತ್ತಿಳೆಯುಂಮಿಗೆ ಬೀಳಲೀಯದಾ ।
ದ್ವಿಜಸುರಪಾದಪಂ ಶಿವನೃಪಂಮಿಗೆ ಗೈಮೆಗೆ ತಂದನಳ್ತಿಯಿಂ ॥

(ಕೆಳದಿ ನೃಪವಿಜಯಂ)

ಹೀಗೆ ನೆರವಿತ್ತಾಗ್ಯೂ ಸರ್ಕಾರಕ್ಕೆ ಬರಬೇಕಾದ ಕಂದಾಯ ತೆರಿಗೆಗಳನ್ನು ಕಟ್ಟುನಿಟ್ಟಾಗಿ ವಸೂಲು ಮಾಡಿಸುತ್ತಿದ್ದ. ಪುಂಡೆದ್ದು ಮೆರೆಯುವವರನ್ನು ಚೆನ್ನಾಗಿ ದಂಡಿಸುತ್ತಿದ್ದ. ಧರ್ಮಿಷ್ಠನಾದ ಪ್ರಭುವೆಂದು ಪ್ರಸಿದ್ಧನಾಗಿದ್ದ. ಲಂಚ ಮತ್ತು ಭ್ರಷ್ಟಾಚಾರಕ್ಕೆಡೆಯಾಗದಂತೆ ತೀವ್ರಎಚ್ಚರಿಕೆ ವಹಿಸಿದ್ದ. ಒಳ್ಳೆಯವರನ್ನುರಕ್ಷಿಸುತ್ತಿದ್ದ.

ನೆರವರಿ ವರಾಡಕಡ ಮಸ
ವರಿ ವಂಚನೆ ವಟ್ಟಲಂಚಹೊರನಿಲ ಹಸ್ತಾಂ
ತರ ಸಂಚಾಯಿತನಿಲಗಳ
ಪರಿವಿಡಿಯಂ ನಿಲಿಸಿ ಸೀಮೆಯುಂ ರಕ್ಷಿಸಿದಂ

(ಕೆಳದಿ ನೃಪವಿಜಯಂ)

ರೈತರು ಸಾಲಮಾಡಕೂಡದೆಂದೂ, ಅವರಿಗೆ ಸಾಲ ಕೊಡಕೂಡದೆಂದೂ, ರೈತರ ಜಮೀನು ಆಯಾ ಮನೆತನದಿಂದ ಹಸ್ತಾಂತರವಾಗಕೂಡದೆಂದೂ ಕಟ್ಟಪ್ಪಣೆಮಾಡಿದ್ದ. ರೈತರಿಗೆ ಬೇಕಾದ ಬೀಜ, ಬಂಡವಾಳಗಳು ಅರಮನೆಯಿಂದಲೇ ಒದಗುತ್ತಿದ್ದಾಗ ಬೇರೆ ಕಡೆ ಸಾಲ ಮಾಡಲಾಗದೆಂಬ ಕಟ್ಟಪ್ಪಣೆಯಿತ್ತು. ಹೀಗೆ ರೈತರು ಪುಷ್ಟರು, ಸಂತೃಪ್ತರೂ ಆಗಿದ್ದರು. ಅವನ ರಾಜ್ಯದಲ್ಲಿ ;

ಪುಸಿ ಠಕ್ಕು ಠೌಳಿ ಚೌರ್ಯಂ ।
ಪಿಸುಣನ್ಯಾಯಂ ವಿರೋಧಮಸಹೃತಿ ಭಯಮು ।
ಬ್ಬಸ ಪೋಸ ಪಾದರಂಗಳ ।
ಪೆಸುರುಸಿರಲ್ಕಿಲ್ಲಮೆನಿಸಿ ಪೊರೆದಂ ಧರೆಯಂ ॥



ಇದಲ್ಲದೆ ವ್ಯಾಪಾರಸ್ಥರಿಂದ ಜನರಿಗೆ ಅನ್ಯಾಯವಾಗದಂತೆಯೂ ಸುಂಕ ವಸೂಲಾಗುವಂತೆಯೂ ಅಧಿಕಾರಿಗಳು ನೋಡಿಕೊಳ್ಳಬೇಕಾಗಿದ್ದಿತು. ಸರ್ಕಾರದ ಲೆಖ್ಖಗಳು ಕ್ರಮಬದ್ಧವಾಗಿರುತ್ತಿದ್ದವು.

ಕಟ್ಟುಕೈವಾಲೆ ಸಮಯಂ ।
ತಟ್ಟಿನ ಮೆರವಣಿಗೆ ಪೊಮ್ಮುಕೈದುಡುಕುಗಳಂ ।
ಪುಟ್ಟಿಸಿ ಪೊಣರ್ವ ಸೆಟ್ಟಿಗ ।
ಳಟ್ಟುಳಿಯಂ ನಿಲಿಸಿಸುಕಮಂ ಬಾಳಿಸಿದಂ ॥

ಕರಣಿಕೆಯನಿತ್ತು ಶಿಸ್ತಿನ ।
ಬರಹಗಳಿಂದಾಯಬೀಯಂ ಬಣಿತೆಗೆತಂ ।
ದುರು, ದುರ್ವ್ಯಯಂಗಳಂ ತಾ ।
ವಿರಚಿಸಿದಾರ್ಜಿಸಿದನೊಪ್ಪುವಗಣಿತಧನವಂ ॥

ದುಷ್ಟಜನರ್ಕಳ ಶಿಕ್ಷಿಸಿ ।
ಶಿಷ್ಟರನುರೆಪೊರೆದು ಸಂತರಂ ಶಿವಪೂಜಾ ।
ನಿಷ್ಠನೆಂದೆನಿಸಿ ಲೋಗರ ।
ರಿಷ್ಟಗಳಂ ತವಿಸಿ ಪೊಡವಿಯುಂ ಪಾಲಿಸಿದಂ ॥

(ಕೆಳದಿ ನೃಪವಿಜಯಂ)

### ಅರಣ್ಯಗಳ ಸಂರಕ್ಷಣೆ

ಎಲ್ಲ ವಿಷಯಗಳಲ್ಲಿಯೂ, ಎಲ್ಲ ಕಾರ್ಯಗಳಲ್ಲಿಯೂ ಶಿವಪ್ಪನಾಯಕನ ಶಿಸ್ತು ಕಂಗೊಳಿಸುತ್ತಿತ್ತು. ಅರಣ್ಯಗಳ ಸಂರಕ್ಷಣೆ ನಿಯಮಗಳಲ್ಲಿ ಅವನ ದೂರದೃಷ್ಟಿ ಎದ್ದು ಕಾಣುತ್ತಿತ್ತು. ಒಂದು ಮರವನ್ನು ಕಡಿದು ತರಬೇಕಾದರೆ ಐದು ಬೀಜಗಳನ್ನು ಅಥವಾ ಐದು ಸಸಿಗಳನ್ನು ನಟ್ಟು ತರಬೇಕಾಗಿತ್ತು ! "ಶಿವತತ್ತ್ವ ರತ್ನಾಕರ" ಗ್ರಂಥದಲ್ಲಿ ವೃಕ್ಷ ಪೋಷಣೆಯ ಮಹತ್ವವನ್ನು ವರ್ಣಿಸಲಾಗಿದೆ. ಇದರ ಗ್ರಂಥಕರ್ತ ಬಸವರಾಜಪ್ರಭು. ಇವನು ಶಿವಪ್ಪನಾಯಕನ ಮೊಮ್ಮಗ. ಕೆಳದಿ ನಾಯಕರ ಕಾಲದ ಭಾವನೆಗಳನ್ನು ಪ್ರತಿಬಿಂಬಿಸಲು ರಾಜನೀತಿಗಳನ್ನು ವಿವರಿಸಲು ಇದಕ್ಕಿಂತ ಉತ್ತಮವಾದ ಗ್ರಂಥ ದೊರೆಯಲಾರದು.

ದಶಕೂಪ ಸಮಾವಾಪೀ ।
ದಶವಾಪೀಸಮೋಹ್ರದಃ ।
ದಶಹ್ರದಸಮಃ ಪುತ್ರೋ ।
ದಶಪುತ್ರಸಮೋ ದ್ರುಮಃ ॥
(ಶಿವತತ್ತ್ವ ರತ್ನಾಕರ-೬ನೇ ಕಲ್ಲೋಲ–ದಶಮಸ್ತರಂಗ-ಶ್ಲೋಕ ೬)

ಅರ್ಥ : "ಹತ್ತು ನೀರಿನ ಹೊಂಡಗಳನ್ನು ತೋಡಿಸಿದ ಪುಣ್ಯ ಒಂದು ಭಾವಿ ತೋಡಿಸಿದರೆ ಬರುತ್ತದೆ. ಹತ್ತು ಭಾವಿಗಳನ್ನು ತೋಡಿಸಿದ ಪುಣ್ಯ ಒಂದು ಕೆರೆ ಕಟ್ಟಿಸಿದರೆ ಲಭ್ಯವಾಗುತ್ತದೆ. ಹತ್ತು ಕೆರೆ ಕಟ್ಟಿಸಿದ ಪುಣ್ಯ ಒಂದು ಮಗುವನ್ನು ಪೋಷಿಸಿದಾಗ ಉಂಟಾಗುತ್ತದೆ. ಹತ್ತು ಮಕ್ಕಳನ್ನು ಸಾಕಿದ ಪುಣ್ಯ ಒಂದು ಗಿಡನೆಟ್ಟು ಮರವಾಗಿ ಬೆಳೆಸಿದರೆ ಬರುತ್ತದೆ". ವೃಕ್ಷಗಳನ್ನು ನೆಡುವುದೂ ಒಂದು ವ್ರತವಾಗಿದ್ದಿತು ಶಿವಪ್ಪನಾಯಕನ ಆಳ್ವಿಕೆಯಲ್ಲಿ. ಶುಭನಕ್ಷತ್ರ ಶುಭದಿನ ಮುಹೂರ್ತಗಳಲ್ಲಿ ಪ್ರತಿ ಕುಟುಂಬವೂ ಆಚರಿಸುತ್ತಲಿತ್ತು, ಈ ವೃಕ್ಷಗಳನ್ನು ನೆಡುವ ಕಾರ್ಯವನ್ನು.

ಮರಗಿಡಗಳನ್ನು ಬೆಳೆಸಲು ಆಷಾಢ-ಶ್ರಾವಣ ಮಾಸಗಳೇ ಶ್ರೇಷ್ಠವೆಂದೂ, ಬಳ್ಳಿಗಳನ್ನು ಬೆಳೆಸಲು ಬೇಸಿಗೆ ಕಾಲ ಬಿಟ್ಟು ಉಳಿದೆಲ್ಲ ಕಾಲಗಳಲ್ಲಿ ಬೆಳೆಸಬಹುದೆಂದು ಶಿವತತ್ವ ರತ್ನಾಕರದಲ್ಲಿ ಉಕ್ತವಾಗಿದೆ.

[ಇಂತಹ ಉತ್ತಮವಾದ ಪದ್ಧತಿಗಳನ್ನು ಪ್ರತಿಗ್ರಾಮದಲ್ಲಿಯೂ ಪ್ರತಿಪಟ್ಟಣದಲ್ಲಿಯೂ ಪುನಃ ಜಾರಿಗೆ ತರುವುದು ರಾಷ್ಟ್ರಹಿತದೃಷ್ಟಿಯಿಂದ ಅವಶ್ಯಕವಾಗಿದೆ. ಅಲ್ಲದೆ ಇಂದಿನ ಸರ್ಕಾರ ಹಾಕುವ ವನಸಂರಕ್ಷಣಾ ಯೋಜನೆಗೆ ಎಷ್ಟು ಮಾರ್ಗದರ್ಶಕವಾಗಿದೆಯಲ್ಲವೆ ?]

## ಕೆರೆಕಟ್ಟೆಗಳ ನಿರ್ಮಾಣ

ಮಲೆನಾಡಿನಲ್ಲಿ ಕೆಳದಿ ನಾಯಕರ ಕಾಲದಲ್ಲಿ ನಿರ್ಮಾಣವಾದ ಸಣ್ಣ ಕೆರೆಕಟ್ಟೆಗಳು ಇಂದಿಗೂ ಇರುತ್ತವೆ. ಅವುಗಳ ಜೀರ್ಣೋದ್ಧಾರ ಮಾಡಿಸಲೂ ಕೂಡ ಈಗಿನ ಸರ್ಕಾರಗಳು ಶಕ್ತವಾಗಿಲ್ಲ. ಭಾವಿಗಳನ್ನು ತೋಡಿಸಿ ಕೊಡುವುದು, ಕೆರೆಕಟ್ಟೆಗಳನ್ನು ನಿರ್ಮಿಸುವುದು ಧರ್ಮಿಷ್ಟರಾದ ರಾಜರ ಕರ್ತವ್ಯವೆಂದು ಭಾವಿಸಲಾಗಿತ್ತು.

"ಏತೇಷಾಂ ಖನನಂ ಕಾರ್ಯಂ ನೃಪೈರ್ಧರ್ಮಪರಾಯಣೈಃ"

ಶಿವಮೊಗ್ಗ ಜಿಲ್ಲೆಯೊಂದರಲ್ಲಿಯೇ ೭೦೦೦ ಸಣ್ಣ ಕೆರೆಗಳಿರುತ್ತವೆ. ಈಗಿನ ಕಾಲಕ್ಕೆ ಸರಾಸರಿ ಹತ್ತು ಸಾವಿರ ರೂಪಾಯಿ ಬೇಕಾಗುತ್ತದೆಯೆಂದು ಅಂದಾಜು ಮಾಡಿದರೆ ಇವುಗಳ 'ರಿಪೇರಿ'ಗೇ ಈಗ ಏಳು ಕೋಟಿ ರೂಪಾಯಿಗಳು ಬೇಕಾಗುತ್ತವೆ. ಮಳೆನೀರು ಹರಿದು ಬರುವ ದಾರಿ ಗಮನಿಸಿ ಹೊಳೆಗೆ ಸೇರುವವರೆಗೆ ಉದ್ದಕ್ಕೂ ಸಾಧ್ಯವಿರುವ ಕಡೆಗಳಲ್ಲೆಲ್ಲ ಕೆರೆಗಳನ್ನು ನಿರ್ಮಿಸಿದ್ದರು. ಇದರಿಂದ ಕೃಷಿಗೆ ಅನುಕೂಲವಾಗುತ್ತಿದ್ದುದಲ್ಲದೆ ಮಣ್ಣು ಸವಕಲನ್ನು ತಡೆಗಟ್ಟುತ್ತಿತ್ತು. ಇಂತಹ ಒಂದು ಉದಾಹರಣೆಯನ್ನು ಶಿವಮೊಗ್ಗ ನಗರದಲ್ಲಿಯೂ ಕಾಣಬಹುದು. ಸೋಮಯ್ಯನಕೆರೆ (ಆಂಗ್ಲಯ್ಯನಕೆರೆ ಎಂದು ಪ್ರಸಿದ್ಧವಾಗಿದ್ದ ಕೆರೆ) ಇದ್ದ ಸ್ಥಳದಲ್ಲಿ ಈಗ ಬಡವರಿಗೆ ನಿವೇಶನಗಳನ್ನು ಕಲ್ಪಿಸಿ



ಕೊಡಲಾಗಿದೆ. ಇದು ಮಳೆನೀರು ಬಂದು ಸೇರುವ ಜಾಡಿನಲ್ಲಿ ಗುಡ್ಡದಿಂದ ಹಿಡಿದು ತುಂಗಾ ನದಿವರೆಗೆ ೨೪ ಸಣ್ಣ-ಸಣ್ಣ ಕೆರೆಗಳನ್ನು ಹೊಂದಿದೆ. ಇದರಿಂದ ಆ ಕಾಲದವರ ದೂರದೃಷ್ಟಿ ಮತ್ತು ಜಾಣ್ಮೆಗಳನ್ನು ಅರಿಯಬಹುದಾಗಿದೆ.

## ಉನ್ನತ ರಾಜನೀತಿ ಪರಾಕ್ರಮಗಳು

ಕ್ರಿ. ಶ. ೧೬೩೯ರಲ್ಲಿ ಕೆಳದಿಯ ವೀರಭದ್ರನಾಯಕನು ರಾಜಧಾನಿಯನ್ನು ಇಕ್ಕೇರಿಯಿಂದ ವೇಣುಪುರಕ್ಕೆ (ಈಗಿನ ನಗರ) ಬದಲಾಯಿಸಿದನು. ಬಿಜಾಪುರದ ಸುಲ್ತಾನರ ಸೇನಾನಾಯಕ ರಣದುಲ್ಲಾಖಾನನು ಮಲೆನಾಡ ಸೀಮೆಯನ್ನೆಲ್ಲ ಮುತ್ತಿಗೆ ಹಾಕಿರಲು ವೀರಭದ್ರನಾಯಕನು ಉಚಿತ ರಾಜನೀತಿ ಮಾರ್ಗದಿಂದ ಸಂಧಾನ ಕ್ರಮಗಳಿಂದ ಅವನ ಮುತ್ತಿಗೆ ತೆಗೆಸಿದನು. ಈ ಸಂಧಾನ ರಾಜಕಾರ್ಯಗಳಲ್ಲಿ ವೀರಭದ್ರನಾಯಕನ ಸಂಬಂಧದಲ್ಲಿ ಚಿಕ್ಕಪ್ಪನಾದ ಶಿವಪ್ಪನಾಯಕ ಮುಂದಾಳುವಾಗಿ ಸಹಾಯಕನಾಗಿದ್ದಾಗ ಅವನ ಉನ್ನತ ರಾಜನೀತಿ, ಸಮಯ ಸ್ಫೂರ್ತಿ, ಪರಾಕ್ರಮಗಳು ರಾಜನ ಗಮನಕ್ಕೆ ಬಂದವು. ಶಿವಪ್ಪನಾಯಕನನ್ನು ಮತ್ತು ಅವನ ತಮ್ಮ ವೆಂಕಟಪ್ಪನಾಯಕನನ್ನು ರಾಜನು ಬಹಳವಾಗಿ ಮೆಚ್ಚಿಕೊಂಡು ಇವರೀರ್ವರನ್ನು ರಾಜಕಾರ್ಯ ನಿರ್ವಹಿಸುವಂತೆ ವೇಣುಪುರ(ನಗರ)ದಲ್ಲಿ ಅಧಿಕಾರದಲ್ಲಿ ನಿಲ್ಲಿಸಿ ತಾನು ಕಂಡಲೂರಿನಲ್ಲಿ ಶಿವಪೂಜಾ ನಿರತನಾಗಿ ಕಾಲ ಕಳೆಯತೊಡಗಿದನು. ಆಗ ದಿವಾನ ಪುಟ್ಟಣ್ಣ, ರಾಮಕೃಷ್ಣಪ್ಪ, ಕಾಶಿಯ ವೀರಯ್ಯ, ಮೊದಲಾದವರು ಶಿವಪ್ಪನಾಯಕನ ಮೇಲ್ಮೆಯನ್ನು ಸಹಿಸದೆ ಅಸೂಯೆಯಿಂದ ಕೂಡಿ ಅವನನ್ನು, ಅವನ ತಮ್ಮನನ್ನು ಕೊಂದುಹಾಕಲು ಒಳಸಂಚು ಮಾಡಿದರು.

ಒಂದು ದಿನ ಅವರೀರ್ವರೂ ಚಿಕ್ಕರಮನೆಯಿಂದ ರಾಜಾಲಯಕ್ಕೆ ಹೋಗಿ ಕಡಿತದ ಚಾವಡಿ (Record Room)ಯಲ್ಲಿ ದಾಖಲೆಗಳನ್ನು ನೋಡುತ್ತಿರುವಾಗ ಆ ಶತ್ರು ಸಂಚುಕಾರರು ಹೊರಗಿನಿಂದ ಬಾಗಿಲುಗಳನ್ನು ಹಾಕಿಸಿ, ಕೂಡಿ ಹಾಕಿ ಬಿಟ್ಟರು. ಅನ್ನಾಹಾರಗಳು ಒದಗದಂತೆ ಸಾಯುವ ಸ್ಥಿತಿಯನ್ನೊದಗಿಸಲು ಹವಣಿಸಿದರು.ಆ ರಾತ್ರಿಯನ್ನು ನಿದ್ರೆಗೈಯದೆ ಎಚ್ಚರಿಕೆಯಲ್ಲಿ ಕಳೆದು ಬೆಳಗಾದ ಒಡನೆಯೇ ಮಹಾಧೈರ್ಯಪರರೂ ಮಹಾಶೂರರೂ ಆದ ಸಹೋದರರೀರ್ವರೂ ತಮ್ಮ ಜತೆಯಲ್ಲಿ ಇದ್ದ ಹೊನ್ನನಾಯಕ, ವೆಂಕಟಯ್ಯ ಮುಂತಾದವರ ಸಹಾಯದಿಂದ ಬಾಗಿಲುಗಳನ್ನೊಡೆದು, ಹೊರನುಗ್ಗಿ ಬರುವಾಗ ತಡೆದವರ ಶಿರಚ್ಛೇದನ ಮಾಡಿ, ಕೋಟೆ ಬಾಗಿಲು ತೆಗೆಸಿ ಸಂಚುಮಾಡಿದವರುಗಳನ್ನೆಲ್ಲ ಮರಣ ದಂಡನೆಗೊಳಪಡಿಸಿ ಮತ್ತೆ ರಾಜಾಧಿಕಾರ ನಡೆಸುತ್ತಿದ್ದರು.

ಅದೇ ಸಮಯದಲ್ಲಿಯೇ ಬಿಜಾಪುರದ ಬಾದಷಹನ ಸೈನ್ಯ ಬಂದು ಶಿವಮೊಗ್ಗಾದ ಕೋಟೆಯನ್ನು ಆಕ್ರಮಿಸಿಬಿಟ್ಟಿತು. ಆಗ ವೀರಭದ್ರನಾಯಕನ ಅಪ್ಪಣೆಯಂತೆ

ಅಪಾರವಾದ ಸೇನೆಯನ್ನು ಸಜ್ಜುಗೊಳಿಸಿ ಶಿವಪ್ಪನಾಯಕ ಮತ್ತು ವೆಂಕಟಪ್ಪನಾಯಕನು ಬಿಜಾಪುರದ ಸೈನ್ಯಕ್ಕೆ ಇದಿರಾಗಿ ಹೋರಾಡಿದರು, ಬಿಜಾಪುರದ ಸೈನ್ಯ ಹಿಂತಿರುಗಿತು. ಆದರೆ ಬಿಜಾಪುರದ ಬಾದಷಹನು ಕೋಪಗೊಂಡು ಬಹಳ ಬಲವಾದ ಸೈನ್ಯವನ್ನು ತೆಗೆದುಕೊಂಡು ಸ್ವತಃ ಶಿವಮೊಗ್ಗೆಯನ್ನು ಮುತ್ತಲೆಂದು ಬಂದಾಗ ಬಾದಷಹನು ಹರಿಹರದಲ್ಲಿ ಬೀಡುಬಿಟ್ಟ ಸಮಯದಲ್ಲಿಯೇ ಶಿವಪ್ಪನಾಯಕನು ಶರಜಾರಾಯನೊಡನೆ (ಸರ್ಜಾ ಮನೆತನದವರು) ಹೋಗಿ ಬಹಳ ಚಾತುರ್ಯದಿಂದ ಸಂಧಾನ ಮಾಡಿ ಬಿಜಾಪುರದವರಿಗೂ ಕೆಳದಿಯವರಿಗೂ ದೃಢಮೈತ್ರಿ ಉಂಟಾಗುವಂತೆ ಮಾಡಿದನು.

ಶಿವಪ್ಪನಾಯಕನಿಗೆ ಸ್ವತಃ ರಾಜನಾಗಬೇಕೆಂಬ ಯಾವ ದುರಾಸೆಯೂ ಇರಲಿಲ್ಲ. ಪಟ್ಟಾಭಿಷಿಕ್ತನಾದ ವೀರಭದ್ರನಾಯಕನಿಗೆ ಸಹಾಯಕನಾಗಿರಬೇಕೆಂಬುದಷ್ಟೇ ಅವನ ಆಶಯವಾಗಿತ್ತು. ಆದುದರಿಂದ ಕಂಡಲೂರಿಗೆ ಹೋಗಿ ರಾಜನು ಮತ್ತೆ ಬಿದನೂರು ನಗರಕ್ಕೆ (ವೇಣುಪುರಕ್ಕೆ) ಹಿಂದಿರುಗಬೇಕೆಂದು ಬೇಡಿಕೊಂಡನು. ಆದರೆ ಇದಕ್ಕೊಪ್ಪದೇ ವೀರಭದ್ರನಾಯಕನು ತಾನು ನಿತ್ಯಶಿವಾರ್ಚನಾದಿ ನಿಯಮಗಳಲ್ಲಿಯೇ ನಿರತನಾಗಿರುವುದಾಗಿಯೂ ಶಿವಪ್ಪನಾಯಕನ ಮುಖಾಂತರವೇ ರಾಜ ಕಾರ್ಯಗಳನ್ನು ನಡೆಸುವುದಾಗಿಯೂ ತಿಳಿಸಿಬಿಟ್ಟಿದ್ದರಿಂದ ಅದರಂತೆ ಶಿವಪ್ಪನಾಯಕನು ಸರ್ವಾಧಿಕಾರಿಯಾಗಿ ನಿಂತನು. ವೀರಭದ್ರನಾಯಕನು ಕ್ರಿ. ಶ. ೧೬೪೬ರಲ್ಲಿ ಲಿಂಗೈಕ್ಯನಾದ ನಂತರ ಶಿವಪ್ಪನಾಯಕನಿಗೆ ವೇಣುಪುರದರಮನೆಯಲ್ಲೇ ರಾಜ್ಯಪಟ್ಟವಾಯಿತು. ಇವನಿಗೆ ನಾಲ್ವರು ಹೆಂಡತಿಯರಿದ್ದರು–ಲಿಂಗಮ್ಮಾಜಿ, ಶಾಂತಮ್ಮಾಜಿ, ಭದ್ರಮ್ಮಾಜಿ, ಬಸವಲಿಂಗಮ್ಮಾಜಿ. ತನಗೆ ಪಟ್ಟವಾದ ಮೇಲೆ ವೇಣುಪುರವನ್ನು ವಿವಿಧ ಯೋಜನೆ–ರಚನೆಗಳಿಂದ ಮಾರ್ಪಡಿಸಿ ಚಿತ್ರಕಾರರು, ಶಿಲ್ಪಿಗಳು, ಕಂಚುಗಾರರು, ಗಾಣಿಗರು, ಕುಂಬಾರರು, ಅಕ್ಕಸಾಲಿಗರು, ಬಡಗಿಯವರು, ನಾಪಿತರು, ಅಗಸರು ಮುಂತಾದ ಕುಶಲಕರ್ಮಿಗಳೆಲ್ಲರಿಗೆ ನಿವೇಶನಗಳನ್ನು ಏರ್ಪಡಿಸಿ ಅವರು ನೆಲೆ ನಿಲ್ಲುವಂತೆ ಮಾಡಿದನು. ಬ್ರಾಹ್ಮಣರು, ಕ್ಷತ್ರಿಯರು, ವ್ಯವಸಾಯಗಾರರು, ವರ್ತಕರು ಇವರಿಗೆಲ್ಲ ಉಚಿತ ಬೀದಿಗಳಲ್ಲಿ ನಿವೇಶನಗಳನ್ನು ಕಲ್ಪಿಸಿದನು. ಶೈವ, ವೈಷ್ಣವ, ಜೈನ ಮುಂತಾದ ಆರು ದರ್ಶನವರ್ತಿಗಳಿಗೂ ನೆಲೆಸಲು ಮತ್ತು ತಮ್ಮ ತಮ್ಮ ಸಂಪ್ರದಾಯಗಳಲ್ಲಿ ನಡೆದುಕೊಳ್ಳಲೂ ಕಟ್ಟುಪಾಡು ಮಾಡಿದನು.

ಕ್ರೈಸ್ತರಿಗೂ, ಮುಸ್ಲಿಮರಿಗೂ ಅವರವರ ಚರ್ಚು–ಮಸೀದಿಗಳನ್ನು ಕಟ್ಟಿಸಿ ಕೊಟ್ಟು ಕಾಪಾಡುತ್ತಿದ್ದನು. ಗೋವಾದಲ್ಲಿ ಚಿತ್ರಹಿಂಸೆಗೆ ಒಳಗಾದ ಕ್ರೈಸ್ತರು ಪೋರ್ಚುಗೀಸರ ಉಪಟಳದಿಂದ ಪಾರಾಗಲು ಶಿವಪ್ಪನಾಯಕನ ರಾಜ್ಯದಲ್ಲಿ ನೆಲೆಸಿದರು. ಅರಬ್‌ದೇಶದಿಂದ ಬಂದ ವ್ಯಾಪಾರಸ್ಥರು ಶಿವಪ್ಪನಾಯಕನ ಪ್ರೀತಿಗೆ ಪಾತ್ರರಾಗಿ ರಾಜನ ಆಸ್ಥಾನದಲ್ಲಿ ಮನ್ನಣೆ ಪಡೆದಿದ್ದರು. ಅನೇಕ ದೇವಾಲಯ, ಶ್ರೀಮಠಗಳನ್ನು ಜೀರ್ಣೋದ್ಧಾರ ಮಾಡಿದ ಕೀರ್ತಿ ಶಿವಪ್ಪನಾಯಕನದು.



## ಶೃಂಗೇರಿಯಲ್ಲಿ ಶಿವಪ್ಪನಾಯಕನ ಶಿಸ್ತು

ವಿಜಯನಗರ ಸಾಮ್ರಾಜ್ಯ ಸಂಸ್ಥಾಪನೆ ಮಾಡಿದ ವಿದ್ಯಾರಣ್ಯರ ಕಾಲದಿಂದ ಶೃಂಗೇರಿಯ ಗುರುಪೀಠವು ವಿಜಯನಗರದ ಹಿಂದೂ ಸಾಮ್ರಾಟರ ಆದರ-ಗೌರವಗಳಿಗೆ ಪಾತ್ರವಾಯಿತು. ವಿಜಯನಗರ ಸಾಮ್ರಾಜ್ಯವು ೧೫೬೫ರಲ್ಲಿ ತಾಳೀಕೋಟೆಯ ಯುದ್ಧದಿಂದ ಹಾಳಾದಾಗ್ಯೂ, ಅಂದಿನಿಂದ ಸ್ವತಂತ್ರ ರಾಜರಾದ ಕೆಳದಿಯರಸರು ಶೃಂಗೇರಿ ಶ್ರೀಮಠದ ವಿಷಯದಲ್ಲಿ ಏಕರೀತಿಯ ಗುರುಭಕ್ತಿ ಭಾವದಿಂದ ನಡೆದುದು ಒಂದು ಮಹದಾದರ್ಶವಾಗಿದೆ. ಧರ್ಮಾಚರಣೆಯಲ್ಲಿ ಕೆಳದಿಯರಸರು ವೀರಶೈವರು. ಶೃಂಗೇರಿಯಲ್ಲಿ ಸ್ಮಾರ್ತ ಬ್ರಾಹ್ಮಣ ಸಂಪ್ರದಾಯದ ಜಗದ್ಗುರು ಪೀಠಕ್ಕೆ ನಿಷ್ಠೆಯಿಂದ ನಡೆದುಕೊಂಡು ಬಂದುದು ಅವರ ವಿಶಾಲ ಮನೋಭಾವದ ದ್ಯೋತಕ. ವಿಜಯನಗರದ ಸಾಮ್ರಾಜ್ಯವಳಿದರೂ ಅದರ ಅತ್ಯುನ್ನತ ಸಂಪ್ರದಾಯವನ್ನುಳಿಸಿಕೊಂಡು ಬಂದು ಪ್ರಜಾರಂಜನೆಯನ್ನುಂಟು ಮಾಡಿದರು ಕೆಳದಿಯ ನೃಪರು. ಶೃಂಗೇರಿಯ ಗುರುಪೀಠಕ್ಕೆ ಬಹಳ ಸಾಲ ಉಂಟಾಗಿತ್ತು. ಶಿವಪ್ಪನಾಯಕನು ಅದನ್ನೆಲ್ಲ ತೀರಿಸಿ, ಒಂದು ತಿಂಗಳ ಕಾಲ ಅಲ್ಲಿಯೇ ನಿಂತು ಬೆಳಿಗ್ಗೆ ಸೂರ್ಯೋದಯ ಕಾಲದಿಂದ ಮರುದಿನ ಬೆಳಗಾಗುವರೆಗೆ ಶ್ರೀಮಠದಲ್ಲಿ ಕಾಲಕಾಲದ ಸೇವೆ ವಿನಿಯೋಗಗಳನ್ನೆಲ್ಲ ನಿಶ್ಚಯಿಸಿ, ಆಯಾ ಸೇವೆಗಳಿಗೆ ಯಾವ ಯಾವ ಮೂಲದಿಂದ ಹಣ ಬರಬೇಕು ಎಂಬುದನ್ನು ಗೊತ್ತು ಮಾಡಿ ಮಠದ ಆಡಳಿತದಲ್ಲಿ ಶಿಸ್ತು ಉಂಟು ಮಾಡಿದನು. ಜಮೀನುಗಳಿಂದ ಬರಬೇಕಾದ ಕಂದಾಯ ವಸೂಲಿ ಕ್ರಮಗಳನ್ನು ದಕ್ಷ ರೀತಿಯಲ್ಲಿ ಏರ್ಪಡಿಸಿದನು. ಸುಂಕವಸೂಲಿ ಕ್ರಮವನ್ನು ವ್ಯವಸ್ಥೆಗೊಳಿಸಿದನು.

## ಔದಾರ್ಯ

ಪರಾಕ್ರಮದಲ್ಲಿ ಕೀರ್ತಿ ಪಡೆದ ಶಿವಪ್ಪನಾಯಕನು ಔದಾರ್ಯದಲ್ಲಿಯೂ ತನಗೆ ಸಮಾನರಿಲ್ಲವೆಂಬ ಹೆಸರು ಪಡೆದಿದ್ದ. ಇಕ್ಕೇರಿ, ಸೊರಬ, ಉಡುಗಣಿ, ಮಹಾದೇವಪುರ, ಅಂಬಲಿಗೊಳ ಮುಂತಾದ ಕೋಟೆಗಳು ಶಿವಪ್ಪನಾಯಕ ಪಟ್ಟಕ್ಕೆ ಬರುವ ಮೊದಲು ಬಿಜಾಪುರದವರ ಸ್ವಾಧೀನವಾಗಿದ್ದವು. ಅವನ್ನೆಲ್ಲ ಮತ್ತೆ ಗೆದ್ದುದಲ್ಲದೇ ಸೋದೆಯ ರಾಜರುಗಳಾಳುತ್ತಿದ್ದ ಶಿರಸಿ, ಹೇರೂರು, ಬೋಳೂರು, ಪುಲಿಯಕಣ್, ಕರೂರು, ಬನವಾಸಿ, ಬದನಗೋಡು ಮುಂತಾದ ಸೀಮೆಗಳನ್ನು ವಶಪಡಿಸಿಕೊಂಡುದಲ್ಲದೆ, ಕರಾವಳಿವರೆಗೆ ರಾಜ್ಯ ವಿಸ್ತರಿಸಿದನು. ಸೋದೆಯ ರಾಜನಾದ ಮಧುಲಿಂಗನಾಯಕನು ಯುದ್ಧದಲ್ಲಿ ಸೋತ ಬಳಿಕ ಶರಣಾಗತನಾಗಿ ದೈನ್ಯದಿಂದ ಬೇಡಿಕೊಳ್ಳಲು ಅವನ ರಾಜ್ಯದ ಕೋಟೆಗಳನ್ನು ಪುನಃ ಅವನಿಗೆ ಕೊಟ್ಟು, ಉದಾರ ರಾಜನೀತಿಯನ್ನನುಸರಿಸಿದನು.

## ಅತ್ಯುನ್ನತ ರಾಜನಿಷ್ಠೆ

ವಿಜಯನಗರದ ಕೃಷ್ಣದೇವರಾಯನೇ ಕೆಳದಿಯ ರಾಜ್ಯ ಸಂಸ್ಥಾಪನೆಗೆ ಅನುಮತಿಯಿತ್ತು, ಇದು ಮಾಂಡಲಿಕ ರಾಜ್ಯವಾಗಿರುವಂತೆ ಪ್ರೋತ್ಸಾಹಿಸಿದವನು. ಈ ಕಾರಣದಿಂದ ಕೆಳದಿಯ ಲಿಂಗವಂತ ರಾಜರು ಆ ಸಾಮ್ರಾಜ್ಯವು ಅಳಿದ ಮೇಲೆಯೂ ಕೂಡ ಅದಕ್ಕೆ ನಿಷ್ಠೆಯನ್ನು ತಪ್ಪಿಸಲೇ ಇಲ್ಲ, ಇದೇ ಕಾಲದಲ್ಲಿ ಮೈಸೂರು ಮಹಾರಾಜರುಗಳು ಕ್ರಮಶಃ ವಿಜಯನಗರಕ್ಕೆ ನಿಷ್ಠೆಯನ್ನು ಕೈಬಿಟ್ಟು ಸ್ವತಂತ್ರವಾಗಿ ರಾಜ್ಯ ವಿಸ್ತರಣೆ ಮಾಡಿದ್ದರು. ಅಂತಹ ಸಂಕಟ ಕಾಲದಲ್ಲಿ ವಿಜಯನಗರದ ಕಡೆಯ ಅರಸನಾದ ಶ್ರೀರಂಗರಾಯನು ಆಶ್ರಯ ಪಡೆಯಲೆಂದು ಶಿವಪ್ಪ ನಾಯಕನ ದರ್ಬಾರಿಗೆ ಬಂದು ದೈನ್ಯದಿಂದ ಯಾಚಿಸಿದನು. ಅವನು ಬಂದದ್ದು ಕೇವಲ ಸಂಸಾರ ನಿರ್ವಹಣೆಗೆ ಯಾವುದಾದರೂ ಒಂದು ಗ್ರಾಮದ ಪಾಳೆಗಾರಿಕೆತನಕ್ಕೆ. ಆದರೆ ಶ್ರೀರಂಗರಾಯನು ವಿಜಯನಗರದ ರಾಜವಂಶದವನೆಂದು ತಿಳಿದೊಡನೆಯೇ ಮೇಲೆದ್ದು ಗೌರವಿಸಿ ಅವನನ್ನೇ ಸಿಂಹಾಸನದ ಮೇಲೆ ಕುಳ್ಳಿರಿಸಿ ತಾನು ಕೇವಲ ಮಾಂಡಲೀಕನೆಂದು ಶಿವಪ್ಪನಾಯಕ ಸಾರಿದನು. ಆದರೆ ಈ ಮಾರ್ಪಾಟಿಗೆ ಶ್ರೀರಂಗರಾಯನು ಒಪ್ಪದೇ ಇರಲು ಆಗ ಅವನಿಗೆ ಸ್ವತಂತ್ರವಾಗಿ ಚಕ್ರವರ್ತಿ ಪಟ್ಟವನ್ನು ಸಖರಾಯ ಪಟ್ಟಣದಲ್ಲಿ ಕಟ್ಟಿ, ಬೇಲೂರು ಮುಂತಾದ ಪ್ರಾಂತಗಳನ್ನು ಅವನ ಸ್ವಾಧೀನ ಮಾಡಿದನು. ಇದು ಪ್ರಪಂಚದ ಇನ್ನಾವ ದೇಶದಲ್ಲಿಯೂ ಕಂಡು ಕೇಳರಿಯದ ರಾಜನಿಷ್ಠೆ-ಧರ್ಮನಿಷ್ಠೆ.

## ಆದರ್ಶ ಹಿಂದೂ ಸಾಮ್ರಾಜ್ಯ ಪುನರ್ ಸ್ಥಾಪನೆಯ ಮಹದಾಕಾಂಕ್ಷೆ

ಶಿವಪ್ಪನಾಯಕನು ಆದರ್ಶ ಹಿಂದೂ ಸಾಮ್ರಾಜ್ಯ ಸಂಸ್ಥಾಪನೆಯ ಮಹತ್ವಾಕಾಂಕ್ಷೆಯಿಂದ ಕೂಡಿದ್ದನು. ತಾನು ಆಳಿದ ೧೫ ವರ್ಷಗಳು ತನ್ನ ಎಲ್ಲ ಕಾರ್ಯಗಳಲ್ಲಿಯೂ ಈ ಧ್ಯೇಯದಿಂದ ಪ್ರೇರಿತನಾಗಿದ್ದನು. ತನ್ನ ಪ್ರಜೆಗಳಲ್ಲಿ ಹಿಂದೂ ಜನರನ್ನು ಯಾವ ವಾತ್ಸಲ್ಯದಿಂದ ಕಾಣುತ್ತಿದ್ದನೋ ಅದೇ ವಾತ್ಸಲ್ಯದಿಂದ ಮುಸ್ಲಿಮರನ್ನು, ಕ್ರಿಶ್ಚಿಯನ್ನರನ್ನೂ ಕಾಣುತ್ತಿದ್ದುದು ಇವನ ಪರಮತಸಹಿಷ್ಣುತೆಯ ಪರಮಾದರ್ಶವನ್ನು ಸಾರುತ್ತಿತ್ತು. ವಿದೇಶಿ ಪ್ರವಾಸಿಗರು ಇವನ ನೀತಿಯನ್ನು ಬಹಳ ಪ್ರಶಂಸೆ ಮಾಡಿದ್ದಾರೆ. ವಿಜಯನಗರದ ಹಿಂದೂ ಸಾಮ್ರಾಜ್ಯ ಪುನರ್ ಸ್ಥಾಪನೆಯೆಂದರೆ ತಾನು ಸ್ವತಃ ಸಾಮ್ರಾಟನಾಗಿ ಮೆರೆಯಬೇಕೆಂಬ ದುರಾಸೆಯಿರಲಿಲ್ಲ. ವಿಜಯಗರದ ರಾಜವಂಶಿಕರನ್ನೇ ಪುನಃ ಸಮಗ್ರ ದಕ್ಷಿಣಭಾರತದ ರಾಜ್ಯಾಧಿಕಾರವುಳ್ಳವರನ್ನಾಗಿ ಮಾಡಬೇಕೆಂಬ ಉದಾತ್ತಧ್ಯೇಯಾವಿಷ್ಟನಾಗಿದ್ದ. ಈ ನಿಲುವಿನಲ್ಲಿ ಸ್ವಾಭಾವಿಕವಾಗಿಯೇ ಮೈಸೂರೊಡೆಯರೊಡನೆ ವೈರಸಂಪ್ರಾಪ್ತವಾಯಿತು. ಆಗಿನ ಪರಿಸ್ಥಿತಿ ಹೇಗಿತ್ತೆಂದರೆ ಈ ಎರಡು ರಾಜ್ಯಗಳಲ್ಲಿ ಯಾವುದು ಪ್ರಬಲವಾಗುವದೋ ಅವರಿಗೆ ದಕ್ಷಿಣ ಭಾರತವೆಲ್ಲ ದಕ್ಕುವಂತಹ ಸ್ಥಿತಿಯಲ್ಲಿತ್ತು.



ಇದನ್ನೆಲ್ಲ ಕಂಡೇ ಶ್ರೀರಂಗಪಟ್ಟಣವನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಶಿವಪ್ಪನಾಯಕ ಮುತ್ತಿಗೆ ಹಾಕಿದನು. ಕಾವೇರಿ ನದಿಗೆ ಸೇತುವೆ ಕಟ್ಟಿಸಿದನು. ಆಗ ಅಲ್ಲಿ ದೊಡ್ಡದೇವರಾಜ ಒಡೆಯರು ಆಳುತ್ತಿದ್ದರು. ಆದರೆ ತನ್ನ ರಾಜಧಾನಿಯಾದ ವೇಣುಪುರದಿಂದ ಬಹುದೂರ ಹೋಗಿದ್ದ ಕಾರಣವೂ ಮತ್ತು ತನ್ನ ಪಾಳಯದಲ್ಲಿಯೇ ಕೆಲವರು ವಿದ್ರೋಹವೆಸಗಿದ್ದರಿಂದಲೂ ದೇಹಾಲಸ್ಯಗೊಂಡು, ಶೀಘ್ರವಾಗಿ ವೇಣುಪುರಕ್ಕೆ ಹಿಂತಿರುಗಿ, ಆಶ್ವಯುಜ ಶುದ್ಧ ೧ ರಂದು ಶಾಲಿವಾಹನ ಶಕ ವರುಷ ೧೫೮೨ ರಲ್ಲಿ (ಕ್ರಿ. ಶ. ೧೬೬೦) ಶಿವಸಾಯುಜ್ಯವನ್ನು ಸೇರಿದನು. ಇಂದಿಗೆ ೩೧೬ ವರ್ಷಗಳು ಕಳೆದಾಗ್ಯೂ ಇಂದಿಗೂ ಮಲೆನಾಡಿನಲ್ಲಿ ಶಿವಪ್ಪನಾಯಕನ ಹೆಸರು ಅಚ್ಚಳಿಯದೆ ಉಳಿದಿದೆ.

ಪಲವುಕ್ತಿಗಳಿಂದೇಂ ರಿಪು ।
ಕುಲಭೈರವ ಶಿವನೃಪಾಲಗೆಣೆಯಹ ನೃಪರೀ ।
ಕಲಿಯುಗದೊಳಿಲ್ಲಮನನಿಪ ।
ಕುಲಕಂ ತಾಂ ತಿಲಕನೆನಿಸಿ ರಾರಾಜಿಸಿದಂ ॥

(ಕೆಳದಿ ನೃಪವಿಜಯಂ)

ಹಲವು ಮಾತುಗಳಿಂದೇನು. ಶತ್ರುಸಮೂಹಕ್ಕೆ ಕಾಲಭೈರವನೆನಿಸಿದ ಶಿವಪ್ಪನಾಯಕನಿಗೆ ಸಮಾನರಾದ ನರಪತಿಗಳು ಈ ಕಲಿಯುಗದಲ್ಲಿಯೇ ಯಾರೂ ಇಲ್ಲ. ನೃಪತಿಶ್ರೇಷ್ಠನಾದ ಶಿವಪ್ಪನಾಯಕನು ರಾಜರೆಲ್ಲರಿಗೆ ತಿಲಕಸ್ವರೂಪನಾಗಿ ರಾರಾಜಿಸಿದನು. ಇಂದಿಗೂ ಇವನ ಕೀರ್ತಿ ಅಚ್ಚಳಿಯದೆ ಉಳಿದುಕೊಂಡು ಬಂದಿದೆ. ಅಶ್ವಾರೋಹಿಯಾಗಿರುವ ಪ್ರತಿಮೆ ಶಿವಮೊಗ್ಗಾ ನಗರಕ್ಕೆ ಶಾಶ್ವತವಾಗಿ ಭೂಷಣವಾಗಿ ಈ ನಾಡಿನ ಸಂಸ್ಕೃತಿ-ಸ್ಥೈರ್ಯಗಳ ಜೀವಂತ ಸಾಕ್ಷಿಯಾಗಿದೆ.



ಮಾಮರದ ಮೊಗ್ಗೆಲ್ಲ ಮಿಡಿಯಾಗಬಹುದೆ ?
ಕಾಯಾದ ಮಿಡಿಯೆಲ್ಲ ಹಣ್ಣಾಗಬಹುದೆ ?
ಕಾದುವವರೆಲ್ಲ ಗೆಲ್ಲಲಿಕೆ ಸಾಧ್ಯವೆ ?
ಸೋಲು-ಗೆಲುವುಗಳು ಸಹಜ ಸಮರದಲಿ.
ಸೋಲಿಂದ ಬೆಲೆಯುಂಟು ಗೆಲುವಿಗೆ ಮನುಜ
ಗೆಲುವಿಂಗೆ ಸೋಲದುವೆ ಆಧಾರಸ್ತಂಭ !
ಸೋಲೆಂಬುದೆ ತಾ ಗೆಲುವಿಗೆ ಆಧಾರ,
ಕಾದಯ್ಯ ಕೊನೆವರೆಗೆ ಅಲುಗಿಸದೆ ನಿರ್ಧಾರ !

—ಗುರುಪಾದ ಸೂರಗೊಂಡ.

# ಯದ್ಭಾವಂ ತದ್ಭವತಿ

ಎಂ. ಜಿ. ಗಂಗನಪಲ್ಲೆ, ಸಿಕೆಂದ್ರಾಪೂರ.

ಜೀವನ ವೃಕ್ಷದ ಮೂಲಾಧಾರದ ಬೇರು ನಮ್ಮ ಮನಸ್ಸು; ಭಾವನೆಗಳ ವಿಕೇಂದ್ರೀಕರಣ ಮನವೆಂಬ ಕೇಂದ್ರದಿಂದ; ನಾವು ನೋಡುವದು ಮಾಡುವದು ನಮ್ಮ ಮನೋದೃಷ್ಟಿಯಂತೆ.

"ಯದ್ಭಾವಂ ತದ್ಭವತಿ" ಎಂದರೆ ಭಾವನೆ ಹೇಗೋ ಹಾಗೆ ಮಾರ್ಗವೆಂದು, ನಮ್ಮ ಆಗುಹೋಗುಗಳೆಂದು. ನಮ್ಮ ವ್ಯವಹಾರ ವಿಹಾರಗಳು ಭಾವನೆಗಳ ಸ್ಥೂಲ ಚಿತ್ರಗಳಾಗಿವೆ. ಈ ಒಂದೊಂದು ಚಿತ್ರಗಳು ನಮ್ಮ ವ್ಯಕ್ತಿತ್ವ ಅಥವಾ ಜೀವನ ನಿರ್ಮಾಣದ ಅವಿಭಾಜ್ಯ ಅಂಶಗಳಾಗಿವೆ. ಸೂಕ್ಷ್ಮವಾಗಿ ವಿಚಾರಿಸಿದರೆ ನಮ್ಮ ದೇಹ ರಚನೆಯಂತೆ ಜಗತ್ತಿನ ರಚನೆ ಇದ್ದುದು ಕಂಡು ಬರುವುದು. ನಮ್ಮ ಆಂತರಿಕ ಆಳವನ್ನು ಅರಿತಾಗ ಜಗತ್ತಿನ ಪೂರ್ಣ ನೆಲೆ ತಿಳಿದುಬರುವುದು.

ಮನಸ್ಸಿನಂತೆ ಮಾರ್ಗ ಅಥವಾ ಭಾವದಂತೆ ಭಾಗ್ಯವೆನ್ನುವದು ಸರ್ವವಿದಿತ ಸೂಕ್ತಿಯಾಗಿದೆ. ಜನ ಸಾಮಾನ್ಯ ವ್ಯವಹಾರದಿಂದ – ಯೋಗ ವಿಜ್ಞಾನದ ಭಾವ ಸೂಕ್ಷ್ಮ ಅನ್ವೇಷಣೆಯವರೆಗೂ ಈ ಉಕ್ತಿ ಅನ್ವಯಿಸುತ್ತದೆ. ಇದನ್ನು ಅತಿ ಪ್ರಾಚೀನ ವ್ಯವಹಾರಿಕ ದೃಷ್ಟಾಂತ ಒಂದರಿಂದ ಪ್ರತಿಪಾದಿಸಬಹುದು.

ಒಮ್ಮೆ ಒಬ್ಬ ಗುರುವಿನೆಡೆಗೆ ಒಬ್ಬ ಬೇಡ, ಒಬ್ಬ ಶ್ರೀಮಂತ, ಒಬ್ಬ ಸ್ವೇಚ್ಛಾಚಾರಿ ಉಪದೇಶ ಪಡೆಯಲು ಹೋದರು. ಗುರುಗಳ ಸನ್ನಿಧಿಯಲ್ಲಿ ತಮ್ಮ ಉದ್ದೇಶ ವ್ಯಕ್ತಗೊಳಿಸಿದರು.

ಗುರುಗಳು ಎಲ್ಲರಿಗೂ 'ದ' ಎಂಬ ಏಕಾಕ್ಷರ ಉಪದೇಶವನ್ನು ಕೊಟ್ಟರು. ಮೂವರು ವಿಸ್ಮಯಗೊಂಡು ಒಬ್ಬರು ಇನ್ನೊಬ್ಬರ ಮುಖ ನೋಡುತ್ತಾ ಬಳಿಕ ಅರ್ಥವಾದಂತೆ ತಲೆದೂಗಿದರು. ಗುರುಗಳು ಅದರ ಅರ್ಥವನ್ನು ಕೇಳಿದರು. ಆಗ ತಮ್ಮ ತಮ್ಮ ಅಭಿಪ್ರಾಯವನ್ನು ಕ್ರಮವಾಗಿ ಆ ಶಿಷ್ಯರು ತಿಳಿಸಿದರು.

ಬೇಡ ಹೇಳಿದ "ನಾನು ಬೇಡ. ದಯಾಹೀನ. ಪಶುಪಕ್ಷಿಗಳ ಪ್ರಾಣಾಪಹರಣವೇ ನನ್ನ ಉದ್ಯೋಗ. ಗುರು 'ದ' ಎಂಬ ಅಕ್ಷರದಿಂದ ದಯಾವಂತನಾಗು ಎಂದು ಬೋಧಿಸಿದರು.



ಶ್ರೀಮಂತ ಹೇಳತೊಡಗಿದ "ನಾನು ಕಡುಲೋಭಿ. ಧನ ಕನಕಗಳ ಸಂಗ್ರಹಾ ಸಕ್ತಿಯ ಸೆಳೆತಕ್ಕೆ ಸಿಕ್ಕಿ ಕೃಪಣನಾಗಿರುವೆ. ಗುರು 'ದ' ಎಂಬ ಅಕ್ಷರದಿಂದ ದಾನ ಮಾಡಲು ಹೇಳಿದರು." ನಂತರ ಮೂರನೆಯದಾಗಿ ಸ್ವೇಚ್ಛಾಚಾರಿ ನುಡಿದ "ನನ್ನ ಮನಸ್ಸು ಚಪಲವಾಗಿದೆ, ದಶೇಂದ್ರಿಯಗಳ ವಶಕ್ಕೆ ಸಿಕ್ಕಿರುವೆ. ನನ್ನ ಆತ್ಮಕಲ್ಯಾಣಕ್ಕಾಗಿ ಗುರುಗಳು 'ದ'ದಿಂದ ದಮನ ಮಾಡಲು ಅರ್ಥಾತ್ ಸಂಯಮಿಯಾಗಲು ಹೇಳಿದರು."

ಗುರುಗಳು ಮೂವರ ಅರ್ಥವು ಸರಿ ಎಂದು ನುಡಿದರು. ಅವರವರ ಭಾವದಂತೆ ಅವರವರ ವಿಚಾರ ದೃಷ್ಟಿ.

ನಾವು ಯಾವುದೇ ಕಾಲದ ಮಹಾ ವ್ಯಕ್ತಿಗಳ ಬಗ್ಗೆ ಯೋಚಿಸ ಹೊರಟರೆ ಅವರ ಬಾಲ್ಯ ಜೀವನದ ಸುಳುಹು ಹೊಳಹುಗಳನ್ನು ಅರಿಯಬೇಕಾದೀತು. ಅವರು ಚಿಕ್ಕಂದಿನಿಂದಲೇ ಮಹತ್ವಾಕಾಂಕ್ಷಿಗಳು, ಸಾಹಸಿಗಳು, ಕುಶಾಗ್ರಮತಿಗಳು, ಪ್ರಾಮಾಣಿಕರಾಗಿದ್ದುದು ಕಂಡು ಬರುವುದು.

ಆದರ್ಶ ಅಹಿಂಸಾವಾದಿ, ಸತ್ಯಾಗ್ರಹಿಯಾದ ಗಾಂಧೀಜಿಯವರಲ್ಲಿ ಬಾಲ್ಯದಿಂದಲೇ ಸತ್ಯನಿಷ್ಠೆ, ಪ್ರಾಮಾಣಿಕತೆಗಳು ನೆಲೆಸಿದ್ದುದನ್ನು ಕಾಣುತ್ತೇವೆ.

ವಿಶ್ವ ವಿಜಯಾಕಾಂಕ್ಷೆಯುಳ್ಳ ಗ್ರೀಕ ವೀರ ಸಿಕಂದರ ಎಳೆತನದಿಂದಲೇ ಮಹಾ ಸಾಹಸಿಯಾಗಿದ್ದ. ಅಮೇರಿಕೆಯ ಪ್ರಥಮಾಧ್ಯಕ್ಷನಾದ ಜಾರ್ಜ ವಾರ್ಷಿಂಗ್‌ಟನ್ನನಲ್ಲಿ ಬಾಲ್ಯದಿಂದಲೇ ಸುನಡತೆ, ಕ್ರಮದ ಜೀವನ ಕಂಡು ಬರುವವು.

ಸರ್ ಸಿ. ವ್ಹಿ. ರಾಮನ್ನರು ಚಿಕ್ಕಂದಿನಿಂದಲೇ ಕುಶಾಗ್ರ ಮತಿಗಳಾಗಿದ್ದರು. ಸೂರ್ಯ ರಶ್ಮಿಯ ಬಗ್ಗೆ ಹೊಸ ಶೋಧನೆ ನಡೆಸಿ ವಿಶ್ವ ವಿಖ್ಯಾತ ವಿಜ್ಞಾನಿಗಳಲ್ಲೊಬ್ಬರಾದರು.

ಸ್ವಾತಂತ್ರ್ಯವೀರ ಸುಭಾಷ್ ಚಂದ್ರಬೋಸರ ವಿದ್ಯಾರ್ಥಿ ಜೀವನವಂತೂ ತಪಶ್ಚರ್ಯ ಹಾಗು ಸಾಹಸಗಳಿಂದ ಕೂಡಿದೆ. ಅವರ ಆತ್ಮ ಸಂಯಮ, ಚಿರಂತನ ಉತ್ಸಾಹಮಯ ಕಾರ್ಯಶಕ್ತಿ ಅವರನ್ನು "ಆಜಾದ್ ಹಿಂದ್"ದ ಸಂಘಟಕರನ್ನಾಗಿ ಮಾಡಿತು. ಭಾರತದ ಬಿಡುಗಡೆಗಾಗಿ ರಾಜಕೀಯ ದೃಷ್ಟಿಯಿಂದ ಹೋರಾಡಿದ ವೀರಕೇಸರಿಯನ್ನಾಗಿ ಮಾಡಿತು.

ಶಿವಾಜಿಯ ಬಾಲ್ಯದಲ್ಲಿ ಶೌರ್ಯ ಸ್ವಾಭಿಮಾನತೆಯ ಬೇರನ್ನು ಕಾಣಬಹುದು. ಆ ಅಂತಃಸತ್ವದಿಂದಲೇ ಶಿವಾಜಿಯು ಕ್ರಮೇಣ ಮುಂಬರಿಯುತ್ತಾ ಅನೈತಿಕ ಪಾಶವೀ ಶಕ್ತಿಗಳ ಮಧ್ಯ ಅವಿಶ್ರಾಂತವಾಗಿ ಹೋರಾಡುತ್ತಾ ಹಿಂದು ಜನಾಂಗವನ್ನು ಸಂಘಟಿಸಿ, ಧರ್ಮರಾಜ್ಯ ಸ್ಥಾಪಿಸಿ, ಭಾರತೀಯ ಸಂಸ್ಕೃತಿಯನ್ನುಳಿಸಿ, ರಕ್ಷಿಸಿ ರಾಜನೀತಿ ಕುಶಲನಾಗಿ ಸುಸಂಘಟಿತ ರಾಜ್ಯಾಡಳಿತ ಸಾಗಿಸಿದ.

ಬಾಲಕ ಜವಾಹರರು ತಂದೆಯ ಒಂದು ಪೆನ್ನನ್ನು ಅಪಹರಿಸಿದ್ದುದು ಸ್ವಾರ್ಥ ತ್ಯಾಗ ಭಾವದ ಬೀಜ ಸಂಕೇತದಂತಿದೆ. ಕದ್ದುದು ಕಳವಿನ ಮನೋಭಾವನೆಯಿಂದಲ್ಲ. ಎರಡೇಕೆ ಎಂದು ? ನೆರೆ ಹೊರೆಯ ರಾಷ್ಟ್ರಗಳ ಬಗ್ಗೆ ಅವರು ಯಾವಾಗಲೂ ಉದಾತ್ತ ಭಾವನೆಯನ್ನೇ ತಳೆದವರಾಗಿದ್ದರು. ಅನೇಕ ಸಂದರ್ಭಗಳಲ್ಲಿ ಅವರ ಮಾನವೀಯ ಸೌಹಾರ್ದತೆ ವಿಶ್ವಶಾಂತಿಯನ್ನುಳಿಸಿ ಜಾಗತಿಕ ನೆಮ್ಮದಿ ಸಾಧಿಸಿತು.

ಜವಾಹರರ ಆ ಉದಾತ್ತ ಜೀವನ ಇಂದಿನ ಯುಗಕ್ಕೊಂದು ಕೊಡುಗೆಯಾಗಿದೆ. ಬಾಲಕ ರವೀಂದ್ರರಲ್ಲಿ ಸ್ವಾಭಾವಿಕವಾದ ಸ್ವತಂತ್ರ ದೃಷ್ಟಿ, ನಿಸರ್ಗ ಪ್ರಿಯತೆಗಳನ್ನು ಕಾಣಬಹುದು. ಅವು ಪೂರ್ಣ ಅರಳಿ ಅವರನ್ನು ಮಹಾಕವಿಯನ್ನಾಗಿ, ಮಹರ್ಷಿಯನ್ನಾಗಿ ರೂಪಿಸಿದವು. ನವಯುಗ ಪ್ರವರ್ತಕರಾದ ಸ್ವಾಮಿ ವಿವೇಕಾನಂದರು ಮಹಾ ವ್ಯಕ್ತಿಗಳ ಬಗ್ಗೆ ಹೀಗೆ ಹೇಳಿದ್ದಾರೆ–

Throughout the history of mankind if any motive power has been more potent than another in the lives of all great men and women, it is that of faith in themselves born of the consciousness that they are to be great, they became great.

ಅವರವರ ಆತ್ಮ ಶ್ರದ್ಧೆಗಳು, ಮನೋ ನಿರ್ಧಾರಗಳು ಅವರನ್ನು ಮಹಾ ವ್ಯಕ್ತಿತ್ವಕ್ಕೇರಿಸಿದವು. ಅದರಂತೆ ನಮ್ಮ ಭಾವ ಬುದ್ಧಿಗಳು, ವಿಚಾರ ವಿಶ್ವಾಸಗಳು ನಮ್ಮನ್ನು ರೂಪಿಸುವವು. ನಮ್ಮ ಇಂದಿನ ಸ್ಥಿತಿಗೆ ನಾವೇ ಹೊಣೆ. ನಮ್ಮ ಭಾವೀ ಜೀವನ ಸೌಧದ ನಿರ್ಮಾಣಕ್ಕೆ ನಾವೇ ಹೊಣೆ, ವಿಧಿಯ ಮೇಲೆ ದೋಷಾರೋಪಣೆಯ ಭಾರ ಹೇರುವುದು ನಮ್ಮ ದುರ್ಬಲತೆಯಲ್ಲದೆ ಮತ್ತೇನು ? "ಪೌರುಷ ಜೀವಿಗೆ ಮಾತ್ರ ಸ್ವಾತಂತ್ರ್ಯದ ಬದುಕು, ಹೇಡಿಗಲ್ಲ."

ನಾವಿಂದು ಬಾಳಿನಲ್ಲಿಯ ನಿರಾಶೆ ನಿಷ್ಕ್ರಿಯತೆಗಳನ್ನು ತೊಡೆದು ಭಗವದ್ ಗೀತೆಯ ಆದೇಶದಂತೆ ಕರ್ಮಯೋಗವನ್ನು ಅನುಸರಿಸುತ್ತಾ ರಾಷ್ಟ್ರ ಹಾಗೂ ನಮ್ಮ ಶ್ರೇಯವನ್ನು ಸಾಧಿಸೋಣ. ನಮ್ಮ ಕ್ಷುದ್ರ ವೃತ್ತಿಗಳೊಂದಿಗೆ, ಅಸಹಜ ಪ್ರವೃತ್ತಿಗಳೊಂದಿಗೆ ಹೋರಾಡಿ ಯಾವಾಗಲೂ ಸದ್ಭಾವ ಸುವಿಚಾರಗಳಿಗೆ ಪ್ರವೇಶವಿತ್ತು, ಅವುಗಳನ್ನು ಕ್ರಿಯೆಯಲ್ಲಳವಡಿಸಿ ಬಾಳೋಣ; ಬಾಳಿನ ದಿವ್ಯಾದರ್ಶದ ಮಹಾ ಮಂದಿರವನ್ನು ನಿರ್ಮಿಸೋಣ. ಕಾಲವ್ಯೂಹಕ್ಕೊಳಪಡದೆ ಭಾವೀ ಮಾನವ ಜನಾಂಗಕ್ಕೆಲ್ಲ ಆಶ್ರಯವಾಗಿ ನಿಲ್ಲುವ ಚಿರವಾದ, ಸ್ಥಿರವಾದ ಭವ್ಯ ವ್ಯಕ್ತಿತ್ವ ಪ್ರಾಸಾದ ನಿರ್ಮಿಸೋಣ.










ಮುದ್ದಿನ ಮಕ್ಕಳೇ,

ಈ ಬಾರಿ ನಿಮಗೆ ಶಾತ್ತ್ವಿಕವಾದ ಒಂದು ದೃಷ್ಟಾಂತ ಹೇಳುವೆ ಕೇಳಿರಿ.

ಒಬ್ಬ ತರುಣ ; ಪ್ರಾಕೃತಿಕವಾಗಿ ಲಕ್ಷಣವಂತ, ಸುಂದರ. ಆದರೆ ಬಡತನದ ಬೇಗೆ ಯಿಂದಾಗಿ ವಂಶ ಪರಂಪರೆಯಾಗಿ ಬಂದ ಸೌಂದರ್ಯವನ್ನು ರಕ್ಷಿಸಿಕೊಳ್ಳಲೂ ಅಸಮರ್ಥ ನಾಗಿದ್ದ. ಚಿಂದಿ ಬಟ್ಟೆಯುಟ್ಟು, ಯಾರದೋ ಒಂದು ಮುರುಕು ಬಂಡಿ ಹತ್ತಿ, ಕುಂಟುತ್ತಾ ನಡೆದ ಆ ಬಂಡಿಯಲ್ಲೇ ಪ್ರಯಾಣ ಸಾಗಿಸಿದ. ಮಾರ್ಗ ಮಧ್ಯದಲ್ಲಿ ಬಳಲಿಕೆ ಎನಿಸಿದಾಗ ಗಾಡಿಯಿಂದಿಳಿದು ಪಕ್ಕದಲ್ಲಿ ನಡೆದ. ಅದೊಂದು ಸುಂದರ ಪ್ರದೇಶ. ಸದಾಕಾಲ ಹರಿಯುವ ಚಿಲುಮೆಯೊಂದು ತಣ್ಣೀರನ್ನು ಒಸರಿಸುತ್ತ ದಾರಿಹೋಕರ ಬಾಯಾರಿಕೆಯನ್ನು ತಣಿಸುತ್ತಿದ್ದುದಷ್ಟೇ ಅಲ್ಲ, ವನರಾಜಿಯನ್ನೆಲ್ಲ ಹಸಿರು ಮುರಿವಂತೆ ಜೀವಂತವಾಗಿರಿಸಿತ್ತು. ಬಳಲಿದ ಯುವಕ ಚಿಲುಮೆಯ ನೀರನ್ನು ಕುಡಿದು, ನೆರಳಿನಲ್ಲಿ ಮಲಗಿದ.

ತೀವ್ರವಾಗಿ ಬಳಲಿದ್ದ ಅವನು ಗಾಢನಿದ್ರೆಯಲ್ಲಿ ತಲ್ಲೀನನಾದ. ಯಾವ ಶಬ್ದವೂ ಅವನನ್ನು ಎಚ್ಚರಿಸದಾಗಿತ್ತು. ಅವನು ನಿದ್ರೆ ಹೋದ ತುಸು ಹೊತ್ತಿನಲ್ಲಿ ಈರ್ವರು ದಂಪತಿಗಳು ಒಂದು ಸುಂದರ ರಥವನ್ನು ಏರಿ ಬಂದರು. ಅಲ್ಲಿಗೆ ಬರುವಷ್ಟರಲ್ಲಿ ವಿಶ್ರಾಂತಿ ಪಡೆಯುವ ಅಪೇಕ್ಷೆಯಾಯಿತು. ಇಳಿದು ನೀರು ಕುಡಿದರು. ಸ್ತ್ರೀಯಲ್ಲಿ ಮಲಗಿದ ತರುಣನನ್ನು ಕಂಡು ಮರುಕ ಹುಟ್ಟಿತು. ಮಮತಾ ಹೃದಯಿಯಾಗಿ ದಿಟ್ಟಿಸಿದಳು. ಆ ಪತಿ-ಪತ್ನಿಯರು ಲಕ್ಷಾಧೀಶ್ವರರಿದ್ದು, ಮಕ್ಕಳಿಲ್ಲದ ಕಾರಣ ದತ್ತು ತೆಗೆದುಕೊಳ್ಳಲು ಮಗುವೊಂದನ್ನು ಅರಸಿಕೊಂಡು ಹೊರಟಿದ್ದರು.

"ಈ ಹುಡುಗ ಸಾತ್ವಿಕನು, ಸುಂದರನೂ ಇದ್ದಾನೆ. ಬಹಳ ಬಡವನಿದ್ದಂತೆ ತೋರುತ್ತದೆ, ನಾವು ಏತಕ್ಕೆ ಇವನನ್ನು ಆರಿಸಿಕೊಳ್ಳಬಾರದು." ಪತ್ನಿ ನುಡಿದಳು. "ನಿಜ, ಆದರೆ ಬಹಳ ಪೆದ್ದು ಇದ್ದಂತೆ ತೋರುತ್ತದೆ. ನಾವು ಇಷ್ಟೊಂದು ಮಾತ ನಾಡುತ್ತ ಎಷ್ಟೋ ಹೊತ್ತು ಕಳೆದರೂ ಎಚ್ಚರಗೊಳ್ಳಲಿಲ್ಲ. ಎಂತಹ ಶಬ್ದ ದಾರಿ

ಮಧ್ಯೆ ಆಗುತ್ತಿದ್ದರೂ ಗಾಢನಿದ್ರೆಯಲ್ಲಿದ್ದಾನಲ್ಲವೆ ?" ಹೀಗೆಂದು ತಿರಸ್ಕರಿಸಿ, ದಂಪತಿಗಳು ಅಲ್ಲಿಂದ ನಡೆದರು.

ಸ್ವಲ್ಪ ವೇಳೆ ಕಳೆಯಿತು. ಓರ್ವ ಸುಂದರ ತರುಣಿ, ಕೋಟ್ಯಾಧೀಶನ ಮಗಳು ಅಲ್ಲಿಗೆ ಬಂದು, ತರುಣನ ಚೆಲುವಿಗೆ ಮಾರುಹೋಗಿ, ಅವನನ್ನೇ ದಿಟ್ಟಿಸುತ್ತಾ ಕುಳಿತಳು. "ನನ್ನಪ್ಪನಿಗೆ ನಾನೋರ್ವಳೇ ಕುವರಿ. ಇವನನ್ನು ಕೈಹಿಡಿಯುವೆ. ಆಗ ಇವನ ದರಿದ್ರತೆ ಹರಿದು ಶ್ರೀಮಂತಿಕೆ ಬರುವುದು." ಹೀಗೆ ಆಲೋಚಿಸುತ್ತ ತಾಸರ್ಧ ಕಳೆಯುತ್ತ ಕುಳಿತರೂ ಅವನು ಎಚ್ಚರಗೊಳ್ಳಲಿಲ್ಲ. ಆಗ ಅವನ ಬಗ್ಗೆ ಆಕೆಗೆ ತಿರಸ್ಕಾರ ಹುಟ್ಟಿತು. "ಇಷ್ಟು ಹೊತ್ತು ನಾನು ಕುಳಿತರೂ ಎಚ್ಚರಗೊಳ್ಳದ ದಡ್ಡನಿವನು. ಹೋಗುವ ಬರುವ ಎಷ್ಟೊಂದು ಸದ್ದಿನ ಮಧ್ಯೆ ಗಡದ್ದಾಗಿ ನಿದ್ರೆ ಮಾಡುತ್ತಿರುವ ಪೆದ್ದ ಶಿಖಾಮಣಿ !" ಆಕೆ ತಿರಸ್ಕಾರದಿಂದ ನಕ್ಕು ಹೊರಟು ಹೋದಳು.

ಅಂತೂ ಕೈಗೆ ಬಂದಿದ್ದ ಎರಡು ಭಾಗ್ಯದ ಕ್ಷಣಗಳು ಅವನ ಬಾಯಿಗೆ ಒದಗಲಿಲ್ಲ. ಆ ಹಾಳು ನಿದ್ರೆಯಿಂದಾಗಿ. ಅವನಿಗೆ ಎಚ್ಚರವಾದಾಗ ಹೊತ್ತು ಇಳಿಯುತ್ತಿತ್ತು. ಯಾವುದೋ ಮುರುಕು ಗಾಡಿ ಜೀಕು ಜೀಕು ಸದ್ದು ಮಾಡುತ್ತ ಬಂದಿತು. ಅದರಲ್ಲಿ ಕುಳಿತು ತನ್ನ ದಾರಿಯಲ್ಲಿ ಸಾಗಿದ. ಹೇಗೆ ಬಂದಿದ್ದನೋ ಆ ಠಾವಿಗೆ ಹಾಗೇ ಅಲ್ಲಿಂದ ಮುಂದೆ ಹೊರಟ.

**ತತ್ತ್ವಜ್ಞಾನ** :– ಜೀವಾತ್ಮನೆಂಬ ತರುಣ ಈ ಜನ್ಮವೆಂಬ ವೃಕ್ಷದ ನೆರಳಿಗೆ ಬಂದು ಮೈಮರೆತು ಮಲಗಿ, ಅಜ್ಞಾನದ ನಿದ್ರೆಯಲ್ಲಿದ್ದಾನೆ. ಗುರುವೆಂಬ ಶ್ರೀಮಂತ ವರವಿದ್ಯೆಯೆಂಬ ಧರ್ಮಪತ್ನಿಯೊಡಗೂಡಿ ಆ ದಾರಿಯಲ್ಲಿ ಈ ಮಾನವನನ್ನು ದತ್ತು ತೆಗೆದುಕೊಂಡು, ಅಧ್ಯಾತ್ಮ ಜ್ಞಾನದ ಸಂಪತ್ತಿಗೆ ಒಡೆಯನನ್ನಾಗಿ ಮಾಡಬೇಕೆಂದು ಕಾಯುತ್ತ ಕುಳಿತರೂ, ಮರೆವಿನ ನಿದ್ರೆಯಿಂದ ಎಚ್ಚರವಿಲ್ಲ. ಮುಕ್ತಿ ಎಂಬ ಅಂಗನೆಯು ಅವನನ್ನು ವರಿಸಿ ದೈವೀ ಸಂಪತ್ತಿನ ಅಧಿಪತಿಯನ್ನಾಗಿ ಮಾಡಬೇಕೆಂದರೂ ಅವನಿಗೆ ಕೂಡಿ ಬರಲಿಲ್ಲ. ಇದೆಲ್ಲಕ್ಕೆ ಕಾರಣ ಮರೆವು. ಬಂದ ಸುವರ್ಣ ಗಳಿಗೆ ಕಳೆದು ಹೋದವು. ತಾರುಣ್ಯದ ಮಧ್ಯಾಹ್ನ ಸರಿದು ವಾರ್ಧಿಕ್ಯದ ಇಳಿ ಹೊತ್ತು ಬಂದಾಗ ಅವನಿಗೆ ಎಚ್ಚರವಾಯಿತು.

ಶಿಥಿಲವಾದ ದೇಹದ ಮುರುಕು ಗಾಡಿಯನ್ನೇರಿ ಈ ಜನ್ಮದ ತಂಗುದಾಣದಿಂದ ಹೇಗೆ ಬಂದಿದ್ದನೋ ಹಾಗೇ ಹೊರಟ. ಸ್ವಲ್ಪ ಎಚ್ಚರಗೊಂಡಿದ್ದರೆ ಗುರುವಿನ 'ಪಡೆದ ಮಗ'ನಾಗಿ, ವರವಿದ್ಯೆಯನ್ನೆ ತಾಯಿಯನ್ನಾಗಿ ಹೊಂದಿ ಜ್ಞಾನ ಸಂಪತ್ತಿಗೆ ಒಡೆಯನಾಗಿ, ಮುಕ್ತಿ ಅಂಗನೆಯ ಕೈಹಿಡಿದು ಅರಿವುಳ್ಳ ಸಿರಿವಂತನಾಗಬಹುದಿತ್ತು. ಅಂತೆಯೇ ಹೇಳುತ್ತಾರೆ ಬಸವಣ್ಣನವರು :

(೬೦ನೇ ಪುಟ ನೋಡಿರಿ)



# ಮಾತು ಜ್ಯೋತಿರ್ಲಿಂಗ

ಸಂ.–ಎಂ. ಗಂಗಮ್ಮ

ನೇಮಸ್ತನೆಂಬುವ ಕ್ರೂರ ಕರ್ಮಿ; ಶೀಲವಂತನೆಂಬುವ ಸಂದೇಹಿ

—ಅಂಬಿಗರ ಚೌಡಯ್ಯ.

ಲಿಂಗವನರಿವಡೆ ಮನವೆ ನಿಚ್ಚಣಿಕೆ. ಜಂಗಮವನರಿವಡೆ ಧನವೆ ನಿಚ್ಚಣಿಕೆ. ಪ್ರಸಾದವನರಿವಡೆ ತನುವೆ ನಿಚ್ಚಣಿಕೆ.

—ಚನ್ನಬಸವಣ್ಣ.

ಮಾಡುವ ಮಾಟವುಳ್ಳನ್ನಕ್ಕ ಬೇರೊಂದು ಪದವನರಸಲೇತಕ್ಕೆ ? ದಾಸೋಹವೆಂಬ ಸೇವೆಯ ಬಿಟ್ಟು ನೀಸಲಾರದೆ ಕೈಲಾಸವೆಂಬ ಆಸೆ ಬೇಡ.

—ಆಯ್ದಕ್ಕಿ ಲಕ್ಕಮ್ಮ.

ಸಗಣಿಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದರ ಗಂಜಳ

—ಬಸವಣ್ಣ.

ಬಿಡದಣ್ಣಾ !

ಕುಂಬಳಕಾಯಿಗೆ ಕಬ್ಬುಣದ ಕಟ್ಟ ಕೊಟ್ಟರೆ ಕೊಳೆವುದಲ್ಲದೆ ಬಲುಹಾಗಬಲ್ಲುದೆ ?

—ಬಸವಣ್ಣ.

ಭಿನ್ನಕೊಡದಲ್ಲಿ ಅಮೃತ ತುಂಬಿದರೆ ಎಷ್ಟು ಹೊತ್ತು ಇದ್ದೀತು ? ಖ್ಯಾತಿಯ ಭಕ್ತಿ–ಕಲಿಕೆಯ ವಿರಕ್ತಿ ಅದರಂತೆ ಕಂಡಯ್ಯ.

—ಷಣ್ಮುಖಸ್ವಾಮಿಗಳು.

ಹೇಗೆ ಎಲ್ಲೆಲ್ಲಿಯೂ ಸಂಚರಿಸುವ ಮಹಾವಾಯು ಆಕಾಶದಲ್ಲುಂಟೋ ಹಾಗೆ ಸಮಸ್ತ ಸಚರಾಚರವು ಪರಮಾತ್ಮನ ಗರ್ಭದಲ್ಲುಂಟು.

—ಭಗವದ್ಗೀತೆ.

ದರ್ಪವನ್ನು ರೂಢಿಸಿಕೊಂಡವನಿಗೆ ವಿಧೇಯತೆಯನ್ನು ಅಳವಡಿಸಿಕೊಳ್ಳುವುದು ಬಹಳ ಕಷ್ಟಕರ.

—ಪಬ್ಲಿಲಿಯಸ್ ಸೈರಸ್.

ಅತಿವಿನಯವು ಧೂರ್ತತೆಯ ಮುಖವಾಡ.

—ರಾಬರ್ಟ್ ಇಂಗರ್‌ಸಾಲ್.

ತೆನೆ ತುಂಬಿದಷ್ಟು ಬತ್ತ ಬಾಗುತ್ತದೆ. ತೆನೆ ಬರಿದಾದಷ್ಟೂ ಬೀಗುತ್ತದೆ.

—ಮಲಯ ಗಾದೆ.

ಪ್ರಚಂಡ ನೆನಪಿನ ಶಕ್ತಿ ಒಳ್ಳೆಯದೇ ಇರಬಹುದು. ಆದರೆ ಮರೆಯುವ ಶಕ್ತಿಯೇ ದೊಡ್ಡಸ್ತಿಕೆಯ ಲಕ್ಷಣ.

—ಎಲ್‌ಬರ್ಟ್–ಹಬ್ಬರ್ಡ್.

**ಈ ತಿಂಗಳ ಮಂಗಳ ಮೂರ್ತಿ**

## ಸಾರ್ಥಕ ಬದುಕಿನ ಶರಣ

# ಡಾ|| ದಾದಾ ಸಾಹೇಬ್ ಚಿಂತಾಮಣಿ ಪಾವಟೆ

—ಗೊ. ರು. ಚನ್ನಬಸಪ್ಪ

ಎಪ್ಪತ್ತಾರು ವರ್ಷಗಳ ಹಿಂದಿನ ಮಾತು—ಬೆಳಗಾವಿ ಜಿಲ್ಲೆಯ ಗೋಕಾಕ ತಾಲ್ಲೂಕಿನ ಹಳ್ಳಿಯೊಂದರಲ್ಲಿ ನಡೆದ ಘಟನೆ. ಹಳ್ಳಿಯ ಹೆಸರು ಮಮದಾಪುರ. ಅಲ್ಲೊಂದು ದೊಡ್ಡ ಮನೆ. ಮಣ್ಣುಗಾಜು ಮಾಡಿದ ಕಲ್ಲಿನ ಕಟ್ಟಡ. ಅದರ ವಾಸದ ಕೋಣೆಯೊಂದರಲ್ಲಿ ಮನ ಕರಗಿಸುವ ದೃಶ್ಯ.

ಓರ್ವ ಮಹಿಳೆ ಹಾಸಿಗೆ ಹಿಡಿದಿದ್ದಾಳೆ. ಹಿಂದಿನ ಎರಡು ತಿಂಗಳಿಂದ ಹಳ್ಳಿಯಲ್ಲಿ ಪ್ಲೇಗು ಮಾರಿಯ ಹಾವಳಿ. ಬಹುತೇಕ ನಿವಾಸಿಗಳೆಲ್ಲ ಊರು ಬಿಟ್ಟು ದೂರದ ಹೊಲಗಳಲ್ಲಿ ಗುಡಿಸಲು ಕಟ್ಟಿಕೊಂಡಿದ್ದಾರೆ. ಆ ಮಹಿಳೆಯ ಅಕ್ಕಪಕ್ಕದಲ್ಲಿ ಆಕೆಯ ಗಂಡ, ನಾಲ್ಕು ಗಂಡು ಮಕ್ಕಳು ಮತ್ತು ಆಕೆಯ ನಾದಿನಿ ಇದ್ದಾರೆ. ಗಾಢ ಮೌನ. ಆ ಮೌನವನ್ನೊಡೆದು ಆಕೆ ನಿಧಾನವಾಗಿ ಕಣ್ಣು ತೆರೆದು, ಹತ್ತಿರದಲ್ಲಿದ್ದ ತನ್ನ ಕಿರಿಯ ಮಗುವಿಗೆ, "ದಾದಣ್ಣ, ನಾನು ಸಾಯುತ್ತೇನೆ. ಕೊನೆಯ ಬಾರಿಗೆ ನನ್ನ ಮೊಲೆಯುಣ್ಣು ಬಾ" ಎಂದು ಹೇಳುತ್ತಿದ್ದಾಳೆ. ಆ ಮಗುವಿಗೆ ಸುಮಾರು ಒಂದೂವರೆ ವರ್ಷ, ಆದರೂ ವಯಸ್ಸಿಗಿಂತ ಚುರುಕು. ಆ ಎಳೆಯ ಹೃದಯದಲ್ಲಿ ಬಯಕೆಗಳ ಸಂಘರ್ಷ ಆರಂಭವಾಯಿತು! ಬಾಲ್ಯ ಸಹಜ ಬಯಕೆ ತಾಯ ಎದೆ ಹಾಲುಣ್ಣಲು ಆಸೆಪಡುತ್ತದೆ. ಆದರೆ ಮತ್ತಾವುದೋ ಗಾಢವಾದ ಬಯಕೆ 'ಬೇಡ' ಎನ್ನುತ್ತದೆ! ತಾಯಿ ಸಾವಿನ ದವಡೆಯಲ್ಲಿರುವಾಗಲೂ ಶೋಷಿಸುವುದು ಕ್ರೌರ್ಯವೆನಿಸಿತೋ ಏನೋ—ಆ ಮಗುವಿಗೆ; ಹಿಂಜರಿದು ಬೇರೆಡೆಗೆ ತಿರುಗುತ್ತದೆ! ತಾಯಿ ಮುಗುಳ್ನಗುತ್ತಾ, "ಓ, ಹಾಗಾದರೆ, ನೀನು ನನ್ನನ್ನು ಕಳೆದುಕೊಳ್ಳುವುದಿಲ್ಲ" ಎಂದು ಹೇಳಿ ತನ್ನ ಗಂಡನ ಕಡೆ ತಿರುಗಿ, "ಇಲ್ಲಿ ಕೇಳಿ, ನಾನು ಸಾಯುವ ಮುನ್ನ ನೀವು ನನಗೆ ಎರಡು ಮಾತು ಕೊಡಬೇಕು. ಒಂದು, ನಮ್ಮ ಮಕ್ಕಳ ಸಲುವಾಗಿ, ನೀವು ಮತ್ತು ಮದುವೆಯಾಗುವುದಿಲ್ಲ ಎಂದು, ಇನ್ನೊಂದು—'ನಮ್ಮ ನೆರೆಹೊರೆಯವರೊಡನೆ ಚೆನ್ನಾಗಿರುತ್ತೇನೆ' ಎಂದು".



ಗಂಡ ಪ್ರತಿಯಾಡಲಿಲ್ಲ. ಹೃತ್ಪೂರ್ವಕವಾಗಿ ಮಾತು ಕೊಟ್ಟ. ಅವೇ ಆ ತಾಯಿಯ ಕೊನೆಯ ಮಾತುಗಳಾದವು. ಕೆಲವೇ ನಿಮಿಷಗಳಲ್ಲಿ ಆಕೆ ಶಾಶ್ವತವಾಗಿ ಕಣ್ಣು ಮುಚ್ಚಿದಳು; ಚಿರಂತನ ಮೌನ ಜಗತ್ತನ್ನು ಪ್ರವೇಶಿಸಿದಳು!

ಆ ತಾಯಿ ಬೇರೆ ಯಾರೂ ಅಲ್ಲ: ಈ ತಿಂಗಳ ನಮ್ಮ ಮಂಗಳಮೂರ್ತಿಗೆ ಜನ್ಮ ಇತ್ತವರು! ಆ ಮುಗ್ಧ ಮಗುವೇ ಪಾವಟೆಯವರು!

ಆಗ
ಅಂಬೆಗಾಲಿಡುವಾಗಲೇ ತಾಯ ಹಂಬಲ ಕಳೆದುಕೊಂಡ ಬಾಲ್ಯ ಜೀವನ. ಮನೆಗೆ ಬಡತನವೇ ಆಭರಣ. ತಂದೆ ಚಿಂತಪ್ಪ ಪಾವಟೆಯವರೇ ತಾಯಿಯಾದರು.

'ಪಾವಟೆ' ಮನೆತನದ ಹೆಸರು. ಹಿರಿಯರು ಸೊಲ್ಲಾಪುರದಿಂದ ಬಂದವರು. ಒಂದು ಕಾಲದಲ್ಲಿ ಸಮೃದ್ಧವಾಗಿದ್ದ ಮನೆತನ. ಪಾವಟೆ ಮನೆತನದವರು ಧಾರ್ಮಿಕ ಶ್ರದ್ಧೆಯುಳ್ಳವರು. ಆ ಕಾಲದಲ್ಲಿ ಹಳ್ಳಿಯ ಜನ ಅವರನ್ನು 'ಶರಣ'ರೆಂದೇ ಪರಿಗಣಿಸಿದ್ದರು.

ಅಧಿಕೃತ ದಾಖಲೆಯ ಪ್ರಕಾರ ದಾದಪ್ಪ ಚಿಂತಪ್ಪ ಪಾವಟೆ ಅವರ ಜನ್ಮ ದಿನ ೧೮೯೯ರ ಆಗಸ್ಟ್ ೨. ಅದಕ್ಕೇ ಅವರು 'ನಾನು ೧೯ನೆಯ ಶತಮಾನಕ್ಕೆ ಸೇರಿದವನು' ಎನ್ನುವುದು.

ಹುಟ್ಟಿದ ಹಳ್ಳಿಯ ಸಾಮಾಜಿಕ ಪರಿಸರ ವಿಶಿಷ್ಟ. ಜಾತಿ-ಭೇದಗಳಿಲ್ಲದೆ ಪರಸ್ಪರ ಪ್ರೀತಿ ಗೌರವಗಳಿಂದ ಕಾಣುವ ಮಧುರ ಜೀವನ. ಅಲ್ಲಿ ಎಲ್ಲರೂ, ಎಲ್ಲರಿಗೂ ನೆಂಟರಿಪ್ಪರು. ಲಿಂಗಾಯತರ ಮಗ ಸತ್ತರೆ ಆತನ ತಂದೆ ತಾಯಿಗಳ ಜೊತೆಗೆ ಬ್ರಾಹ್ಮಣರ ತಾಯಿಯೂ ಕಣ್ಣೀರಿಡುತ್ತಿದ್ದ ಕಾಲ. ಹಿಂದೂ-ಮುಸ್ಲಿಮರಿಬ್ಬರೂ 'ಮೊಹರಂ' ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತಿದ್ದ ಸಂಪ್ರದಾಯ. ಪರಸ್ಪರ 'ಮಾವ', 'ಚಿಕ್ಕಪ್ಪ' ಎಂಬ ಆತ್ಮೀಯ ಸಂಭೋದನೆ.

ಬಾಲ್ಯ ಜೀವನದಲ್ಲಿ ಕಂಡುಂಡ ಗ್ರಾಮೀಣ ಬದುಕನ್ನು ನೆನೆದರೆ ಪಾವಟೆಯವರ ಮಾಗಿದ ಹೃದಯಕ್ಕೆ ಅನಿರ್ವಚನೀಯ ಆನಂದ. (ಅಂತಹ ವಾತಾವರಣ ಇಂದಿನ ಸಮಾಜ ಜೀವನದಲ್ಲಿ ಬರಿ ಕನಸು!)

ಮಮದಾಪುರದ ಅಂದಿನ ಪರಿಸರ ಪಾವಟೆ ಅವರ ಮುಂದಿನ ಬದುಕಿಗೆ ನೀಡಿದ ಸ್ಫೂರ್ತಿ ಅಪಾರ. ಆಗಿನ ಸಮಾಜ ಜೀವನದ ಮೌಲ್ಯಗಳು ಬಾಲಕ ಪಾವಟೆ ಅವರ ಮೇಲೆ ಬೀರಿದ ಪರಿಣಾಮ ಅಲ್ಪವೇನಲ್ಲ.
ಅದನ್ನು ಉಳಿಸಲು
ಆಗ ಪ್ರಾಥಮಿಕ ಶಾಲಾ ಶಿಕ್ಷಣ ಶುಲ್ಕ ತಿಂಗಳಿಗೆ ಒಂದಾಣೆ.

ಅಣ್ಣನಿಂದ ಮನೆಯಲ್ಲೇ ಬೋಧನೆ! ವಾರ್ಷಿಕ ಪರೀಕ್ಷೆಗಾಗಿ ಶಾಲಾ ಪ್ರವೇಶ. ಪರೀಕ್ಷೆಗೆ ಬಂದ ಶಿಕ್ಷಣಾಧಿಕಾರಿಗಳಿಂದ ಬಾಲಕ ಪಾವಟೆ ಅವರಿಗೆ ಕೊಡುಗೆಯಾಗಿ ಗಣಿತದ ಪುಸ್ತಕ. ಮುಂದೆ ಗಣಿತಶಾಸ್ತ್ರ ತಜ್ಞರಾಗಲು ಅದು ಸಾಂಕೇತಿಕ!

ಶಾಲೆಯಲ್ಲಿ ಸಂಸ್ಕೃತ ವ್ಯಾಕರಣ ಕ್ಲಿಷ್ಟ ವಿಷಯ. ಒಮ್ಮೆ ಅಧ್ಯಾಪಕರೊಬ್ಬರು ಬಾಲಕ ಪಾವಟೆಯವರ ಪ್ರಶ್ನೆಗೆ ಕೊಟ್ಟ ಉತ್ತರ ಬಹು ಸ್ವಾರಸ್ಯಕರ: ''ಅಯ್ಯೋ ಹುಡುಗ, ಸಂಸ್ಕೃತವೆಂದರೆ ಸಂಸ್ಕೃತ. ಯಾರೊಬ್ಬರೂ ಇದನ್ನು ಹೇಗೆ, ಏಕೆ ಎಂದು ಪ್ರಶ್ನಿಸುವಂತಿಲ್ಲ! ಇದು ನಮ್ಮ ಪೂರ್ವಿಕರ ಪವಿತ್ರ ಭಾಷೆ. ಮೇಲಾಗಿ ನಿನ್ನ ಪ್ರಶ್ನೆಗೆ ಉತ್ತರ ಹೇಳುವುದು ನನಗೆ ಗೊತ್ತಿದ್ದರೆ ಈ ೧೫ ರೂ. ಮಾಸಿಕ ಸಂಬಳದ ಮಾಸ್ತರನಾಗಿರದೆ ಒಬ್ಬ ಸಂಸ್ಕೃತ ಪಂಡಿತನಾಗಿರುತ್ತಿದ್ದೆ!"

ಯಾವ ವಿಷಯವೇ ಇರಲಿ, ಪಾವಟೆ ಅವರಿಗೆ ಕಲಿಕೆಯಲ್ಲಿ ಪ್ರಾಮಾಣಿಕತೆ, ಪ್ರಾಥಮಿಕ ಶಾಲೆಯ ಹಂತದಿಂದಲೇ ವಿದ್ಯಾರ್ಥಿ ವೇತನ ಪಡೆದ ಅರ್ಹತೆ! ಕೊಲ್ಲಾಪುರ,ರಾಜಾರಾಂ ಪ್ರೌಢಶಾಲೆಯಲ್ಲಿ ಅಭ್ಯಾಸ. ಲಿಂಗಾಯತ ಬೋರ್ಡಿಂಗಿನವರ ನೆರವು. ವಿದ್ಯಾರ್ಥಿ ವೇತನದ ಪ್ರಶ್ನೆ ಬಂದಾಗ, ಜಾತಿ ಅಥವಾ ಧರ್ಮದ ಆಧಾರದ ಮೇಲೆ ಕೊಡುವುದಾದರೆ ಅಂತಹ ನೆರವೇ ಬೇಡವೆನ್ನುವ ಆತ್ಮಾಭಿಮಾನ. ಮನೆತನದ ಘನತೆಯ ರಕ್ಷಣೆ.

೧೯೧೯ರಲ್ಲಿ ಧಾರವಾಡ ಕರ್ನಾಟಕ ಕಾಲೇಜಿಗೆ ಪ್ರವೇಶ. ಕಾಲೇಜಿನ ಅಭ್ಯಾಸದುದ್ದಕ್ಕೂ ಪ್ರಥಮ ಶ್ರೇಣಿ. ಬಿ. ಎ. (ಆನರ್ಸ್) ನಲ್ಲಿ ಇಡೀ ವಿಶ್ವವಿದ್ಯಾನಿಲಯದಲ್ಲೇ ಗಣಿತದಲ್ಲಿ ಪ್ರಥಮ ಸ್ಥಾನ ಗಳಿಸಿದ ಪ್ರತಿಭೆ.

"ಯಸ್ತು ವಿಜ್ಞಾನವಾನ್ಭವತಿ ಯುಕ್ತೇನ ಮನಸಾ ಸದಾ
ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ|"

**ಕಠೋಪನಿಷತ್ತಿನ ವಾಣಿ ಪಾವಟೆ ಅವರಲ್ಲಿ ಸಾರ್ಥಕವಾಗಿತ್ತು!**

ಗಣಿತ ಶಾಸ್ತ್ರದಲ್ಲಿ ಪರಮ ಆಸಕ್ತಿ. ಶಿಸ್ತು ಮತ್ತು ಗುಣಮಟ್ಟಕ್ಕೆ ಹೆಸರಾದ ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಲ್ಲಿ ಉನ್ನತ ವ್ಯಾಸಂಗ ಮಾಡುವ ಹಂಬಲ. ಸಿರಸಂಗಿ ವಿಶ್ವಸ್ಥ ನಿಧಿಯ ಬೆಂಬಲ. ಮೂರು ವರ್ಷಗಳ ವಿಶೇಷ ಅಧ್ಯಯನ. ಗಣಿತಶಾಸ್ತ್ರದ ಟ್ರೈಪಾಸ್ ಪರೀಕ್ಷೆಯಲ್ಲಿ ಪ್ರಥಮ ಸ್ಥಾನ. 'ರ್‍ಯಾಂಗ್ಲರ್' ಎಂಬ ವಿಶಿಷ್ಟ ಪದವಿ ಗಳಿಕೆ.

ಸ್ವದೇಶಕ್ಕೆ ಹಿಂತಿರುಗುತ್ತಿದ್ದಂತೆ ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ



ಪ್ರೊಫೆಸರ್ ಹುದ್ದೆ. ಅರ್ಹತೆಗೆ ಮಾನ್ಯತೆ ಕೊಟ್ಟವರು ಉಪಕುಲಪತಿ ಪಂಡಿತ ಮದನ ಮೋಹನ ಮಾಲವೀಯ. ಅವರ ಬಗ್ಗೆ ಪಾವಟೆ ಅವರಿಗೆ ತುಂಬು ಗೌರವ.

೧೯೩೦ ರಲ್ಲಿ ಮುಂಬಯಿ ಸರ್ಕಾರದ ವಿದ್ಯಾ ಇಲಾಖೆಯಲ್ಲಿ ಪ್ರಥಮ ದರ್ಜೆಯ ಅಧಿಕಾರ ಸ್ವೀಕಾರ. ಪ್ರಾಮಾಣಿಕ ದುಡಿಮೆಯೇ ಸೇವೆಗೆ ಆಧಾರ.

೧೯೪೦ರಲ್ಲಿ ಮುಂಬಯಿ ವಿದ್ಯಾ ಇಲಾಖೆಯ ನಿರ್ದೇಶಕರ ಪಟ್ಟ. ೧೯೫೪ ರವರೆಗೆ ಸಮರ್ಥ ಆಡಳಿತ. ಪ್ರಾಥಮಿಕ ಶಿಕ್ಷಣ, ಮೂಲ ಶಿಕ್ಷಣ, ಕಡ್ಡಾಯ ಶಿಕ್ಷಣ, ಮಾಧ್ಯಮಿಕ ಶಿಕ್ಷಣ, ಪಠ್ಯಪುಸ್ತಕಗಳು, ಉಪಾಧ್ಯಾಯರ ತರಬೇತಿ–ಇವುಗಳಿಗೆ ಸಂಬಂಧಿಸಿದ ಸಮಸ್ಯೆಗಳ ಪರಿಹಾರಕ್ಕೆ ಡಾ|| ಪಾವಟೆ ಸಲ್ಲಿಸಿದ ಕಾಣಿಕೆ ಸ್ಮರಣೀಯ.

ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಬಡಿದಿದ್ದ 'ಬಾಲಗ್ರಹ' ಬಿಡಿಸಿದ ಕೀರ್ತಿ ಡಾ|| ಪಾವಟೆ ಅವರಿಗೆ ಸಲ್ಲಬೇಕು. ಹದಿಮೂರು ವರ್ಷಗಳ ಕಾಲ ನಿರಂತರ ಉಪಕುಲಪತಿಯಾಗಿದ್ದ ಡಾ|| ಪಾವಟೆ ಅವರು ಕರ್ನಾಟಕ ವಿಶ್ವವಿದ್ಯಾನಿಲಯದ ಘನತೆ ಗೌರವ ಹೆಚ್ಚಿಸಿದರು. ಮದರಾಸು ವಿಶ್ವವಿದ್ಯಾನಿಲಯದ ಉಪಕುಲಪತಿ ಡಾ|| ಲಕ್ಷ್ಮಣಸ್ವಾಮಿ ಮೊದಲಿಯಾರ್ ಅವರನ್ನು ಬಿಟ್ಟರೆ ಭಾರತದಲ್ಲಿ ಇವರಷ್ಟು ದೀರ್ಘ ಕಾಲ ಉಪಕುಲಪತಿಗಳಾಗಿದ್ದವರು ಬೇರಾರೂ ಇದ್ದಂತೆ ಕಾಣುವುದಿಲ್ಲ.

ಕರ್ನಾಟಕ ವಿಶ್ವವಿದ್ಯಾನಿಲಯದ ನಿಜವಾದ ಶಿಲ್ಪಿ ಡಾ|| ದಾದಾ ಸಾಹೇಬ್ ಚಿಂತಾಮಣಿ ಪಾವಟೆ. ೧೯೫೮ ರಲ್ಲಿ ಅಭಿಮಾನಿಗಳು ಆಚರಿಸಿದ ಅವರ ಷಷ್ಟ್ಯಬ್ದಿ **ಅವರ ಸೇವೆಗೆ ಸಲ್ಲಿಸಿದ ಕೃತಜ್ಞತೆ!**

ಶಿಕ್ಷಣ ತಜ್ಞರಾಗಿ ಪಾಲುಗೊಂಡ ರಾಷ್ಟ್ರೀಯ ಹಾಗೂ ಅಂತರ ರಾಷ್ಟ್ರೀಯ ಸಭೆ ಸಮ್ಮೇಳನಗಳಿಗೆ ಲೆಕ್ಕವಿಲ್ಲ. ೧೯೫೬ ರಲ್ಲಿ ಜಿನೀವಾದಲ್ಲಿ ನಡೆದ ಅಂತರ ರಾಷ್ಟ್ರೀಯ ಶಿಕ್ಷಣ ಸಮ್ಮೇಳನದಲ್ಲಿ ಭಾರತ ನಿಯೋಗದ ನಾಯಕತ್ವ. ೧೯೫೮ ರಲ್ಲಿ ಭಾರತದ ಅಂತರ ವಿಶ್ವವಿದ್ಯಾಲಯ ಮಂಡಳಿಯ ಚುನಾಯಿತ ಅಧ್ಯಕ್ಷತೆ. ೧೯೬೧ ರಿಂದ ವಿಶ್ವ ವಿದ್ಯಾನಿಲಯ ಗ್ರ್ಯಾಂಟ್ಸ್ ಕಮಿಷನ್ ಸದಸ್ಯತ್ವ. ಕಾಮನ್‌ವೆಲ್ತ್ ರಾಷ್ಟ್ರಗಳ ವಿಶ್ವ ವಿದ್ಯಾನಿಲಯಗಳ ಸಂಘದ ಸದಸ್ಯತ್ವ. ಗೌಹಾತಿ ವಿಶ್ವವಿದ್ಯಾಲಯ ವಿಚಾರಣಾ ಆಯೋಗದ ಅಧ್ಯಕ್ಷತೆ–ಹೀಗೆ ಹತ್ತಾರು ಹೊಣೆ ಹೊತ್ತ ಕಾರ್ಯದಕ್ಷತೆ.

ಇದಷ್ಟೇ ಅಲ್ಲ. ೨೪ ವರ್ಷಗಳ ಸರ್ಕಾರಿ ಸೇವೆ, ೧೩ ವರ್ಷಗಳ ಉಪಕುಲಪತಿ ಸ್ಥಾನದ ಸೇವೆ ಆದ ಮೇಲೂ ಮತ್ತೊಂದು ಅನಿರೀಕ್ಷಿತ ಕಾರ್ಯಭಾರ ಕಾದಿತ್ತು.

೧೯೬೭ರ ಆಗಸ್ಟ್ ೧೨ ರಂದು ಕರ್ನಾಟಕದ ಅಂದಿನ ಮುಖ್ಯಮಂತ್ರಿ ಶ್ರೀ ಸಿದ್ದವನಹಳ್ಳಿ ನಿಜಲಿಂಗಪ್ಪನವರು ಒಂದು ಸುದ್ದಿ ಕೊಟ್ಟರು. ಆ ಸುದ್ದಿ

ಸಿದ್ಧಿಸಿತು. ಡಾ|| ಪಾವಟೆ ಪಂಜಾಬಿನ ರಾಜ್ಯಪಾಲರಾದರು. ಆಗ ಪಾವಟೆ ಅವರಿಗೆ ೬೮ ವಯಸ್ಸು. ಶಿಕ್ಷಣ ಕ್ಷೇತ್ರದಿಂದ ರಾಜಕೀಯ ಆಡಳಿತ ಕ್ಷೇತ್ರ. ಅಲ್ಲೂ ಯಶಸ್ಸು. ಒಟ್ಟಾರೆ ಪಾವಟೆಯವರು ಯಶಸ್ಸನ್ನು ಕಟ್ಟಿಕೊಂಡೇ ಹುಟ್ಟಿದವರು.

ಡಾ|| ಪಾವಟೆ ಬಸವಣ್ಣನವರ ಪರಮ ಆರಾಧಕರು. ಶರಣ ಧರ್ಮದಲ್ಲಿ ಅಚಲ ವಿಶ್ವಾಸ. ಪ್ರಚಲಿತ ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯ ದೋಷಗಳಿಗೆ ಬಸವಣ್ಣನ 'ಫಿಲಾಸಫಿ' ಪರಿಣಾಮಕಾರಿ ಮದ್ದಾಗಬಲ್ಲದು ಎನ್ನುವ ನಂಬಿಗೆ.

ಸ್ಮರಣಶಕ್ತಿ ಡಾ|| ಪಾವಟೆ ಅವರ ದೊಡ್ಡ ಆಸ್ತಿ ! (ಈಚೆಗೆ ಅದು ಕಡಮೆಯಾಗುತ್ತಿದೆ ಎನ್ನುತ್ತಾರೆ) ಕನ್ನಡ, ಇಂಗ್ಲೀಷ್, ಸಂಸ್ಕೃತ ಭಾಷೆಗಳ ಜೊತೆಗೆ ಮರಾಠಿ, ಫ್ರೆಂಚ್, ಜರ್ಮನಿ ಭಾಷೆಗಳನ್ನೂ ಬಲ್ಲರು. ಒಳ್ಳೆಯ ಈಜುಗಾರರು (ನೀರಿನಲ್ಲಷ್ಟೇ ಅಲ್ಲ; ನಿಜ ಜೀವನದಲ್ಲೂ! )

ಬರೆದ ಅನೇಕ ಗಣಿತದ ಪುಸ್ತಕಗಳು ಶಾಲಾ ಕಾಲೇಜುಗಳಲ್ಲಿ ವ್ಯಾಪಕ ಬಳಕೆಯಾಗುತ್ತಿವೆ. ಮೊದಲು ರಚಿಸಿದ ಗಣಿತದ ಪುಸ್ತಕ ಸುಮಾರು ೧೫ಕ್ಕೂ ಹೆಚ್ಚು ಬಾರಿ ಮುದ್ರಣ ಕಂಡಿದೆ. ಅವರ ಗಣಿತದ ಪುಸ್ತಕಗಳಿಂದ ಪ್ರಯೋಜನ ಪಡೆದವರ ಸಂಖ್ಯೆ ಅಗಣಿತ !

"Knowledge is the treasure of the mind, but discretion is the key to it" ಎಂಬ ನುಡಿಗನುಗುಣವಾಗಿ ನಡೆದುಕೊಂಡು ಬಂದಿರುವ ಡಾ|| ಪಾವಟೆ ಕನ್ನಡ ನಾಡಿನ ಕೀರ್ತಿ. ಅವರು ತುಂಬು ವಾಸ್ತವವಾದಿ. 'ಪರದ ಮೇಲೆ ಕಣ್ಣಿಟ್ಟು ಧರೆಯನ್ನು ಕಡೆಗಣಿಸಿದವರಲ್ಲ. ಸುರಧೇನು ವಿಗೇಣಿಯಿಡ ಹೊರಟು ಮನೆಯಂಗಳದ ಕಿರಿ ಹೂವ ಮರೆತವರಲ್ಲ !'

ಹೊಸ ಚಿಗುರು–ಹಳೆ ಬೇರು ಕೂಡಿದರೇ ಮರದ ಸೊಗಸು ಎನ್ನುವ ಡಾ|| ಪಾವಟೆ ಅವರಿಗೆ ಇಂದಿನ ತಲೆ ಮಾರಿನ ಬಗೆಗೆ ಅಪಾರ ವಿಶ್ವಾಸ !

(ಡಾ|| ಡಿ. ಸಿ. ಪಾವಟೆ ಅವರ ಸಾಧನೆ–ಸಿದ್ಧಿಗಳ ಬಗ್ಗೆ ಹೆಚ್ಚು ತಿಳಿದುಕೊಳ್ಳಲು ಅವರ "Memoirs of an Educational Administrator, ಮತ್ತು My days as Governor" ಎಂಬ ಆತ್ಮ ಕಥನಗಳನ್ನು ಓದಬೇಕು.)

★★★

'ಜೀವನವು ಸೇವೆಗಾಗಿ, ಭೋಗಕ್ಕಾಗಿ ಅಲ್ಲ.'—ಗಾಂಧೀಜಿ.

'ಜೀವನ ಕಿರಿದು, ಜ್ಞಾನ ಭಂಡಾರ ಹಿರಿದು'—ಗ. ನಾ. ಪಂಡಿತ.






**ಹಿಂದಿನ ಸಂಚಿಕೆಯವರೆಗೆ–**

(ಧರ್ಮಪ್ರಸಾರ–ವಿದೇಶ ಸಂದರ್ಶನದ ಹೊಣೆ ಹೊತ್ತ ಪೂಜ್ಯ ಮಾತೆಯವರು ೧೯೭೩ ಮೇ ೧೪ರಂದು ತಾಯ್ನಾಡಿನಿಂದ ತೆರಳಿದ್ದರು. ಏಕಾಂಗಿನಿಯಾಗಿ ಅಪರಿಚಿತ ನಾಡಿಗೆ ಹೋದ ಅವರಿಗೆ ಪ್ರಾರಂಭದಲ್ಲಿ ಸ್ವಲ್ಪ ತೊಂದರೆಯಾದರೂ, ಸ್ವಧೈರ್ಯದಿಂದ ಪರಿಹರಿಸಿಕೊಂಡು ಮುಂದೆ ಸಾಗಿದರು. ಒಂದು ದಿನ ಮೇಜರ್ ರಾಮಚಂದ್ರನ್ ಎಂಬುವರ ಸಹಾಯದಿಂದ ವಿಶ್ವವಿಖ್ಯಾತ ಬ್ರಿಟಿಷ್ ಮ್ಯೂಸಿಯಮ್ ಅನ್ನು ನೋಡಲು ಹೊರಟಿದ್ದಾರೆ.)

—ಜಗದ್ಗುರು ಮಾತಾಜಿ.

**ಧಾರಾವಾಹಿ–೫**

ನಮ್ಮ ನಾಡಿನಷ್ಟು ಪ್ರಖರವಲ್ಲದ ಪ್ರಶಾಂತ ಸೂರ್ಯನ ಹೊಂಗಿರಣಗಳ ಧಾರೆಯಲ್ಲಿ ಮೀಯುತ್ತಿತ್ತು ಭವ್ಯಾಕಾರದ ಕಟ್ಟಡ. ಘುಮಾಕಾರದ ಕಟ್ಟಡದ ಎತ್ತರದ ಸ್ತಂಭಗಳು, ವಿಶಾಲ ಪ್ರಾಂಗಣ, ವಿಸ್ತಾರವಾದ ಕೋಣೆಗಳು ಆಶ್ಚರ್ಯ – ಆನಂದ ಸಮ್ಮಿಲಿತ ಸಂಭ್ರಾಂತಿಯನ್ನು ಹುಟ್ಟಿಸುತ್ತಿದ್ದವು. ಮಹಾದ್ವಾರದ ಹೊಸ್ತಿಲಲ್ಲೇ ನಮ್ಮ ಕೈಚೀಲ ಇತ್ಯಾದಿ ವಸ್ತುಗಳ ಪರಿಶೀಲನೆ, ತಪಾಸಣೆ. ಅತ್ಯಮೂಲ್ಯ ದಾಖಲೆಗಳನ್ನು ಒಳಗೊಂಡ ಈ ಸಂಗ್ರಹಾಲಯದ ರಕ್ಷಣೆ ಆದ್ಯ ಕರ್ತವ್ಯವೆಂಬಷ್ಟು ಕಾಳಜಿ ಆ ಜನದ್ದು. ಹಿಂದೊಮ್ಮೆ ಇಂತಹ ಎಚ್ಚರಿಕೆಯಲ್ಲೂ ಧೂರ್ತರು ಪ್ರವೇಶಿಸಿ ಎಸೆದ ಕೈಬಾಂಬು ಅಮೂಲ್ಯ ಸಂಗ್ರಹಾಲಯದ ಬೃಹತ್ ಭಾಗವನ್ನು ಸುಟ್ಟಿದ್ದ ಕಾರಣ, ಅಂದಿನಿಂದ ಕಾವಲು ಇನ್ನೂ ಬಿಗಿಯಾಗಿದೆ.

ಬ್ಲೂಮ್ಸ್‌ಬರಿ ವಲಯದಲ್ಲಿರುವ ಬ್ರಿಟಿಷ್ ಮ್ಯೂಸಿಯಮ್, ಅಂದರೆ ಈಗ ನಾವು ಪ್ರವೇಶಿಸುತ್ತಿದ್ದುದು, ಐತಿಹಾಸಿಕ ದಾಖಲೆಗಳನ್ನು, ಭೂ ಉತ್ಖನನದಲ್ಲಿ ಸಿಕ್ಕ ಅಮೂಲ್ಯ ವಸ್ತುಗಳು, ವಿಶೇಷ ಹಸ್ತಪ್ರತಿ, ಪ್ರಕಟಿತ ವಿಶೇಷ ಗ್ರಂಥಗಳನ್ನು ಒಳಗೊಂಡಿದೆ. ಇಲ್ಲಿಯ ಮುಖ್ಯ ಆಕರ್ಷಣೆ ಹಿರಿದಾದ ಗಾತ್ರದ ವಿಶ್ವವಿಖ್ಯಾತ ಗ್ರಂಥಾಲಯ. ಗ್ರೇಟ್‌ರಸೆಲ್ ಸ್ಟ್ರೀಟ್‌ನಲ್ಲಿ ಮುಖ್ಯ ಪ್ರವೇಶ ದ್ವಾರವಿರುವ ಈ ವಸ್ತು ಸಂಗ್ರಹಾಲಯ ಮಾನವಕುಲದ ಐತಿಹಾಸಿಕ ಅಧ್ಯಯನಕ್ಕೆ ಸಹಾಯಕವಾಗುವ ಒಂದು

‘ಬೆಳಕಿಂಡಿ’ ಎನ್ನಬಹುದು. ಒಂದೊಂದು ರಾಜ್ಯ, ದೇಶಗಳ ರಾಜಧಾನಿಗಳನ್ನು ಸಂದರ್ಶಿಸಿದರೆ ಆಯಾ ರಾಜ್ಯ–ದೇಶಗಳ ಕಲ್ಪನೆ ನಮಗೆ ಬಂದರೆ, ಲಂಡನ್ನನ್ನು ಮತ್ತು ಮುಖ್ಯವಾಗಿ ಬ್ರಿಟಿಷ್ ಮ್ಯೂಸಿಯಮ್ಮನ್ನು ಸಂದರ್ಶಿಸಿದರೆ ಅಂಗೈಯಲ್ಲಿ ಜಗತ್ತನ್ನು ಇಟ್ಟು ತೋರಿಸಿದಂತೆನಿಸಿ, ‘ನಾವು ಜಗತ್ತಿನ ಒಂದು ಅಂಗ’ ಎಂಬ ಜಾಗತಿಕ ಪ್ರಜ್ಞೆ ಮೂಡದಿರದು. ಅಷ್ಟೇ ಅಲ್ಲದೆ, ‘ನಾವೇ ಬಹಳ ಮುಂದುವರಿದವರು, ಉಳಿದೆಲ್ಲರು ಅನಾಗರಿಕರು’ ಎಂಬ ಕೂಪ ಮಂಡೂಕ ಪ್ರವೃತ್ತಿ ಕಡಿಮೆಯಾಗುವುದು. ಜಗತ್ತಿನ ಇತರ ಜನಾಂಗ–ರಾಷ್ಟ್ರಗಳ ಪ್ರಗತಿಯನ್ನು ಅರಿತಾಗ ನಾವಿನ್ನೂ ಎಷ್ಟು ಹಿಂದಿದ್ದೇವೆಂಬ ಅರಿವು, ಮುಂದುವರಿಯಬೇಕೆಂಬ ಸಂಕಲ್ಪ ಮೂಡದಿರವು. ಇದು ನಮ್ಮನ್ನು ನಾವು ಸುಧಾರಿಸಿಕೊಳ್ಳಲು ಕೈಗನ್ನಡಿ ಹಿಡಿಯುವುದಷ್ಟೆ !

**ವಸ್ತು ಸಂಗ್ರಹಾಲಯದ ಹುಟ್ಟು**

ನಮ್ಮ ನಾಡಿನ ಸಂಸ್ಕೃತಿ—ಗತ ಇತಿಹಾಸ ವೈಭವವನ್ನು ಸಂರಕ್ಷಣೆ ಮಾಡುವ ಸಂಸ್ಮರಿಸುವ ಪ್ರಜ್ಞೆ ನಮ್ಮಲ್ಲಿ ಸ್ವಲ್ಪ ಕಡಿಮೆ. ಆದರೆ ಬ್ರಿಟಿಷ್ ನಾಡಿನವರಿಗೆ ಇಡೀ ಜಗತ್ತಿನ ಸಂಸ್ಕೃತಿಗಳ ಸಂರಕ್ಷಣಾ ಕರ್ತವ್ಯ ಪ್ರಜ್ಞೆ. ಅದರ ಪ್ರತೀಕವೇ ಬ್ರಿಟಿಷ್ ಮ್ಯೂಸಿಯಮ್. ೧೭೫೩ರಲ್ಲಿ, ಎರಡನೆ ಜಾರ್ಜನು ಆಳುವ ಕಾಲದಲ್ಲಿ ಬ್ರಿಟಿಷ್ ಪಾರ್ಲಿಮೆಂಟ್ ಒಂದು ನಿರ್ಣಯ ಕೈಗೊಂಡು, ಧರ್ಮದರ್ಶಿಗಳ ಒಂದು ಸಮಿತಿ ರಚಿಸಿತು. ಅದರ ಉದ್ದೇಶ ಸರ್ ಹಾನ್ಸ್ ಸ್ಲೋನ್ (೧೬೬೦–೧೭೫೩) ಎಂಬುವವನು ಸಂಗ್ರಹಿಸಿದ್ದ ಕಲಾಕೃತಿಗಳು, ಐತಿಹಾಸಿಕ ದಾಖಲೆಗಳು, ಗ್ರಂಥಗಳು ಮುಂತಾದವನ್ನು ಇಪ್ಪತ್ತುಸಾವಿರ ಪೌಂಡ್‌ಗಳಿಗೆ ಕೊಳ್ಳುವುದೇ ಆಗಿತ್ತು. ಇದಕ್ಕೂ ಮುಂಚೆ ಇದ್ದ ಸರ್ ರಾಬರ್ಟ್ ಕಾಟನ್ (೧೫೭೧–೧೬೩೧) ಸಂಗ್ರಹಿಸಿದ ವಸ್ತುಗಳನ್ನೂ ತೆಗೆದುಕೊಳ್ಳ ಬಯಸಿತು. ಹೀಗೆ ಇಬ್ಬರು ವ್ಯಕ್ತಿಗಳು ಸಂಗ್ರಹಿಸಿದ್ದ ಅಪೂರ್ವ ಸಂಗ್ರಹಗಳ ವಿಕ್ರಯ, ಜೋಡಣೆ, ಸಂರಕ್ಷಣೆ ಮತ್ತು ಸಾರ್ವಜನಿಕ ಉಪಯೋಗಕ್ಕೆ ಅವಕಾಶ, ಮುಂತಾದ ಧ್ಯೇಯಗಳಿಂದ ಬ್ರಿಟಿಷ್ ಮ್ಯೂಸಿಯಮ್ ಮೈದಾಳಿದುದು.

ಬ್ರಿಟಿಷ್ ಮ್ಯೂಸಿಯಮ್ಮಿನ ಗ್ರಂಥಾಲಯ ಸಂಗ್ರಹಿಸಿರುವ ಪುಸ್ತಕಗಳ ಸಂಖ್ಯೆ ಮತ್ತು ಸತ್ವ ಭೂಮಾವಾದುದು. ಅಂತರರಾಷ್ಟ್ರೀಯ ಮಟ್ಟದ ಜ್ಞಾನ ದೇಗುಲವೆಂದರೆ ಉತ್ಪ್ರೇಕ್ಷೆಯಲ್ಲ. ಆದರೆ, ಲಂಡನ್ ನಗರ, ಇಂಗ್ಲೆಂಡ್ ನಾಡಿನಲ್ಲೇ ಎಷ್ಟೋ ವರ್ಷಗಳಿಂದ ವಾಸಿಸಿರುವ ಅನೇಕ ಭಾರತೀಯರು ಆ ಮ್ಯೂಸಿಯಮ್ಮನ್ನಾಗಲೀ, ಗ್ರಂಥಾಲಯವನ್ನಾಗಲೀ ನೋಡಿಲ್ಲದಿರುವುದು, ಅದರ ಬೆಲೆಯನ್ನರಿತಿಲ್ಲದಿರುವುದು ವಿಷಾದನೀಯವೆನ್ನಿಸುತ್ತದೆ. ಅಷ್ಟೇ ಅಚ್ಚರಿಯನ್ನುಂಟು ಮಾಡುತ್ತದೆ. ಬ್ರಿಟಿಷ್ ಮ್ಯೂಸಿಯಮ್ ಗ್ರಂಥಾಲಯ ಪ್ರದರ್ಶನಾಲಯವಷ್ಟೇ ಅಲ್ಲದೆ ರಾಷ್ಟ್ರೀಯ ಮಟ್ಟದ ರೆಫರೆನ್ಸ್ ಲೈಬ್ರರಿಯಾಗಿದೆ. ಮೊದಲು ಕೆಲದಿನ ಸಾರ್ವಜನಿಕರಿಗೆ ಅದು ತೆರೆದಿಟ್ಟಿದ್ದ



ಭಾಗವಾಗಿದ್ದರೂ ಈಗ ಓದುಗರಿಗೆ ಮಾತ್ರ ಮೀಸಲಾಗಿದೆ. ಅದರ ಉದ್ದೇಶ ಓದುಗರಿಗೆ ಆತಂಕವಾಗಬಾರದೆಂಬುದು ಒಂದಾದರೆ, ಬಾಂಬ್–ಬೆಂಕಿ ಮುಂತಾದ ಆಕಸ್ಮಿಕಗಳಿಂದ ರಕ್ಷಿಸುವುದು ಎರಡನೆಯದು. ಮೇಜರ್ ರಾಮಚಂದ್ರನ್‌ರವರ ಬಳಿ ಓದುಗರ ಪ್ರವೇಶ ಪತ್ರವಿದ್ದ ಕಾರಣ ನನಗೆ ಪ್ರವೇಶ ಸುಲಭವಾಯಿತು. ಆದರೆ ಗ್ರಂಥಾಲಯದೊಳಕ್ಕೆ ಪ್ರವೇಶಿಸಿದಾಗ ಹೊರಬರುವುದು ಕಷ್ಟವಾಯಿತು ! ಸಮುದ್ರದ ಅಲೆಗಳಂತೆ ಅಸಂಖ್ಯಾತ ಗ್ರಂಥಗಳ ಸಾಲು, ಆ ಅಲೆಗಳ ನಡುವೆ ತೇಲುವ ಪುಟ್ಟ ದೋಣಿಗಳಂತೆ ಓದುತ್ತ ಕುಳಿತ ಅಭ್ಯಾಸಿಗರು. ನೀರವ ಶಾಂತಿ ವಿಶಾಲವಾದೊಂದು ಹುಲ್ಲುಗಾವಲಿಗೆ ಎಳೆಗರುವನ್ನು ಬಿಟ್ಟಾಗ ಅತ್ಯಾಕಾಂಕ್ಷೆಯಿಂದ ಅದು ಅಲ್ಲಲ್ಲಿ ಎಳೆದು ತಿನ್ನುವಂತೆ ಪುಸ್ತಕಗಳನ್ನು ಅಲ್ಲಲ್ಲೇ ಎಳೆದುನೋಡುವ ಪ್ರಯತ್ನ. ಹಸಿವೆ ಆರಲಿಲ್ಲ. ಪೌರ್ವಾತ್ಯ ವಿಭಾಗಕ್ಕೆ ಬಂದಾಗ ಇನ್ನೂ ಅಚ್ಚರಿ ಕಾದಿತ್ತು. ಹಿಂದೂಯಿಸಮ್ ಮೇಲೆ ಅಸಂಖ್ಯಾತ ಗ್ರಂಥಗಳು. ಕಿಟ್ಟೆಲ್ ಕೋಶ ಸಹ ಲಭ್ಯ. ‘ಕೆಸರಿಗಿಳಿದ ಎಮ್ಮೆಯಂತೆ’ ಹೊರಬರಲು ನನಗೆ ಮನಸ್ಸಾಗಲಿಲ್ಲ. ಛೇ ! ಉಪಮಾನ ಚೆನ್ನಾಗಿಲ್ಲವಷ್ಟೇ; ತಾವರೆಯ ಮಕರಂದ ಈಂಟುತ್ತ ಮೈಮರೆವ ದುಂಬಿಯಂತೆ, ತಿಳಿಸರೋವರದಲ್ಲಿಳಿದ ಪರಮ ಹಂಸೆಯಂತೆ ಆ ಗ್ರಂಥಗಳೆಂಬ ಅಲೆಗಳೊಡನೆ ಸಂಭಾಷಿಸುತ್ತ ಮೈಮರೆತೆ. “ಹೀಗಾದರೆ ಮ್ಯೂಸಿಯಮ್ ನೋಡಲು ವೇಳೆ ಉಳಿಯದು” ಎಂಬ ಆತುರವನ್ನು ರಾಮಚಂದ್ರನ್ ಜಾಸ್ತಿ ಮಾಡಿದಾಗ, ನನಗೆ ಆಗಾಗ, ಬಂದು ಅಭ್ಯಸಿಸಲು ಅವಕಾಶ ಮಾಡಿಕೊಡಲು ಕೇಳಿದೆ. ಅರ್ಜಿ ಕೊಟ್ಟದ್ದಾಯಿತು. ಸಂದರ್ಶನ ಕೊಟ್ಟರು, ಉದ್ದೇಶ ಕೇಳಿ, ನನ್ನ ವಿಸಿಟಿಂಗ್ ಕಾರ್ಡ್–ಬಯೋಡೇಟ ನೋಡಿ ಪ್ರಭಾವಿತರಾಗಿ, ದಿಢೀರ್ ಫೋಟೋ ತೆಗೆದು ಐದು ನಿಮಿಷಗಳಲ್ಲಿ ಭಾವಚಿತ್ರ ಸಹಿತವಾದ ಪ್ರವೇಶ ಪತ್ರ ಕೊಟ್ಟೇಬಿಟ್ಟರು. ಎಲ್ಲ ಕೆಲಸ ಚಕಚಕ, ನಮ್ಮಲ್ಲಿಯ ‘ಕೋಣ ಗಾಣ ತಿರುವಿದಂತಹ’ ‘ಕೆಂಪು ಪಟ್ಟಿ’ ಕೆಲಸವಲ್ಲ ; ಸಂಪ್ರೀತಳಾದೆ. ಏಕೆಂದರೆ ಈಗ ಅದರ ಸಹಾಯದಿಂದ ಎಲ್ಲಿ ಬೇಕಾದರೂ ತಿರುಗಾಡಬಹುದಿತ್ತು. ಹಿಂದೂ, ಬೌದ್ಧ, ಸಿಖ್ ಎಲ್ಲ ಧರ್ಮಗಳ ಬಗ್ಗೆ ಹೇರಳ ಗ್ರಂಥರಾಶಿ. ಆ ನಂತರ ನಾನೂ ನಮ್ಮ ಪ್ರಕಟಣೆಗಳನ್ನೇ ಅಲ್ಲದೆ ಕರ್ನಾಟಕ ಸರ್ಕಾರದ ಪ್ರಕಟಣೆ Sri Basaveswara ಮತ್ತು Vacanas of Akkamahadevi ಕೃತಿಗಳನ್ನು ಕೊಡುಗೆಯಾಗಿ ನೀಡಿದಾಗ ತುಂಬಾ ಸಂತಸದಿಂದ ಅವರು ಸ್ವೀಕರಿಸಿದರು.

ಬ್ರಿಟಿಷ್ ಮ್ಯೂಸಿಯಮ್‌ನ ಎಲ್ಲ ವಿಭಾಗಗಳು ಆಕರ್ಷಣೀಯವಿದ್ದರೂ, ವಿಶೇಷ ಗಮನ ಸೆಳೆಯುವವು ಆಭರಣ ವಿಭಾಗ, (ಸ್ತ್ರೀಯರ ಸಂದಣಿ ಹೆಚ್ಚು ಇಲ್ಲಿ!) ಮತ್ತು ಕಲಾವಂತಿಕೆ, ಕುಸುರಿ ಕೆಲಸದ ಪಿಂಗಾಣಿ ಸಾಮಾನುಗಳ ವಿಭಾಗ. ಮಾನವನ ಇತಿಹಾಸ ದಲ್ಲಿ ಆಭರಣಗಳು ಎಂಥಾ ಮಹತ್ವ ಪೂರ್ಣ ಪಾತ್ರ ವಹಿಸಿರುವುದೇ ಅಲ್ಲದೆ, ಸಾಕಷ್ಟು ಹಿಂದಿನಿಂದಲೇ ಅತ್ಯಂತ ಸೂಕ್ಷ್ಮ ಕುಸುರಿನ ಆಭರಣ ರಚನೆ ಸಾಧ್ಯವಾಗಿತ್ತೆಂಬುದು ಅಲ್ಲಿ ಸ್ಪಷ್ಟವಾಗಿ ತಿಳಿಯುವುದು. ನಮ್ಮ ಭಾರತೀಯ ಸಂಪ್ರದಾಯದ ಬುಗುಡಿ,

ಲಕ್ಷ್ಮೀಕಾಸಿನ ಸರಗಳು ಸಹಿತ ಪ್ರದರ್ಶಿಸಲ್ಪಟ್ಟಿವೆ. ಇತಿಹಾಸದಲ್ಲಿ ದೊರೆತ ಮೊಟ್ಟ ಮೊದಲ ಬೈಬಲ್ ಹಸ್ತಪ್ರತಿ, ಪ್ರಕಟಿತ ಪುಸ್ತಕ ಮುಂತಾದುವೇ ಅಲ್ಲದೆ, ನಮ್ಮ ಭಾರತದ ಭಾಗವತ ಮುಂತಾದ ಎಷ್ಟೋ ಕೃತಿಗಳ ಪುರಾತನ ತಾಡ ಓಲೆಗಳ ಹಸ್ತ ಪ್ರತಿಗಳು ಅಲ್ಲಿವೆ. ಅತ್ಯಂತ ಜಾಗರೂಕತೆಯಿಂದ ಇವೆಲ್ಲವುಗಳನ್ನು ಕಾಯ್ದಿರಿಸಿದ್ದಾರೆ.

ಬ್ರಿಟಿಷ್ ಮ್ಯೂಸಿಯಮ್ ಸಂದರ್ಶನಾನಂತರ ಚರ್ಚ್ ಮಿಷನರಿ ಸೊಸೈಟಿಯ ಬೃಹತ್ ಗ್ರಂಥಾಲಯಕ್ಕೆ ಮೇಜರ್ ರಾಮಚಂದ್ರನ್ ನನ್ನನ್ನು ಕರೆದೊಯ್ದರು. ಅದು ದಕ್ಷಿಣ ಪೂರ್ವ ಲಂಡನ್ನಿನ ವಾಟರ್‌ಲೂ ರಸ್ತೆಯಲ್ಲಿರುವ, ಸುಪ್ರಸಿದ್ಧ ಓಲ್ಡ್ ವಿಕ್ ಥಿಯೇಟರ್ ಪಕ್ಕದಲ್ಲಿದೆ. ಅತ್ಯಂತ ಪ್ರಸಿದ್ಧ ಧರ್ಮ ಸಂಸ್ಥೆಯ- ಭವ್ಯ ಗಂಥಾಲಯ. ಉಪಯುಕ್ತ ಧಾರ್ಮಿಕ ಗ್ರಂಥಗಳು ಅಧ್ಯಯನಕ್ಕೆ ಬೇಕಾಗಿದ್ದರಿಂದ ಅಂಥ ಗ್ರಂಥಾಲಯುಗಳ ಪರಿಚಯ ನನಗೆ ಅವಶ್ಯವಿತ್ತು. ಕ್ರೈಸ್ತಧರ್ಮವು ಜಗತ್ತಿನ ವಿವಿಧ ಭಾಗಗಳಲ್ಲಿ ಹಬ್ಬಿದ ಬಗ್ಗೆ ವಿವರವಾದ ಸಾಹಿತ್ಯ ಇಲ್ಲಿ ದೊರೆಯುವುದಲ್ಲದೆ, ಭಾರತೀಯ ಧಾರ್ಮಿಕ ಸಾಹಿತ್ಯವೂ ಇದೆ. ಧರ್ಮ ಬೋಧಕರ ವಿಶೇಷ ಉಪಯೋಗಕ್ಕೆ ಈ ಗ್ರಂಥಾಲಯ ಇರುವುದರಿಂದ ನನಗೆ ಅವಶ್ಯವಿದ್ದ ಸಾಹಿತ್ಯ ಸಿಗುವ ಬಗ್ಗೆ ಖಚಿತ ವೆನಿಸಿ, ಸಂತೋಷವಾಯಿತು. ಬ್ರಿಟಿಷ್ ಮ್ಯೂಸಿಯಮ್ಮಿನಿಂದ ಗ್ರಂಥಗಳನ್ನು ಹೊರಗೆ ಒಯ್ಯಲು ಅವಕಾಶವಿರಲಿಲ್ಲ. ಇಲ್ಲಿಯಾದರೋ ಸದಸ್ಯಳಾಗಿ ಬಿಟ್ಟರೆ ಐದು ಗ್ರಂಥ ಗಳನ್ನು ಒಯ್ಯಬಹುದಿತ್ತು. ಗ್ರಂಥಾಲಯವನ್ನು ಸಂದರ್ಶಿಸಿದೆ, ಸಂಪ್ರೀತಳಾದೆ.

ಆಂಗ್ಲನಾಡಿನಲ್ಲಿ ಶಿಕ್ಷಣ ಮಟ್ಟವು ಚೆನ್ನಾಗಿರುವದಷ್ಟೇ ಅಲ್ಲ, ವೃತ್ತಪತ್ರಿಕೆ ಓದುವದು, ರೇಡಿಯೋ ಕೇಳುವುದು ಉತ್ತಮ ಹವ್ಯಾಸಗಳಾಗಿವೆ. ಪತ್ರಿಕೆಗಳನ್ನು ಎರವಲು ಪಡೆದು ಓದುವ ಅಭ್ಯಾಸ ಜನಕ್ಕಿಲ್ಲ. ಬಸ್, ರೇಲ್ವೆಗಳಲ್ಲಿ ಪ್ರಯಾಣಿಸು ವವರ ಕೈಯಲ್ಲಿ ಸಾಮಾನ್ಯವಾಗಿ ಒಂದೊಂದು ಪತ್ರಿಕೆ. ಆಷ್ಟಾಗಿ ಹರಟೆ, ಗಲಾಟೆ ಇಲ್ಲದೆ ನೀರವವಾಗಿ ಪ್ರಯಾಣಿಸುವ ಅವರ ಗಮನ ಪತ್ರಿಕೆಗಳಲ್ಲಿ ಅಡಕ. ರೇಡಿಯೋಗಳು ಜ್ಞಾನ–ಸಾಹಿತ್ಯ–ವಾರ್ತೆಗಳ ಪ್ರಸಾರದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಪ್ರತಿ ಕ್ಷಣಕ್ಕೂ ಈ ದೇಶದ ವಿವಿಧ ಭಾಗಗಳಲ್ಲಿ ನಡೆಯುವ, ಜಗತ್ತಿನ ವಿವಿಧ ಭಾಗಗಳಲ್ಲಿ ನಡೆಯುವ ಘಟನೆಗಳ ವಾರ್ತೆ ಬಿತ್ತರವಾಗುತ್ತದೆ. ವಾರ್ತೆಯನ್ನು ಆಲಿಸುವ ಪರಿಪಾಠ ಬಹಳ. ಊಟ-ಉಡಿಗೆಯಷ್ಟೇ ಮಹತ್ವ ವಾರ್ತೆಗೂ ಸಹ. ಮಕ್ಕಳಿಗೆ ಇಂಗ್ಲೀಷ್, ವಿಜ್ಞಾನ, ಕಲೆ ಮುಂತಾದವನ್ನು ರೇಡಿಯೋ ಮೂಲಕ ಕಲಿಸುವುದು ಬಹಳ ಪ್ರೌಢ. ಮಕ್ಕಳಿಗೇ ಏಕೆ ದೊಡ್ಡವರಿಗೆ ಸಹ ಇದು ಉಪಯುಕ್ತ. ಒಂದೇ ಒಂದು ಉದಾಹರಣೆ. Combination ಎಂಬ ಪದವನ್ನು ಕೊಟ್ಟು, ಒಂದು ನಿಮಿಷ ವೇಳೆಯಲ್ಲಿ ಎಷ್ಟು ಸಾಧ್ಯವೋ ಅಷ್ಟು ಸಣ್ಣ ಪದಗಳನ್ನು ಬರೆಯಿರೆಂದು ಹೇಳಿದಾಗ ಆ ಮಕ್ಕಳು ಚಿಂತನೆಗೆ ತೊಡಗಿ ಊಹೆಗೆ ಮೀರಿ ಚೆನ್ನಾಗಿ ವರ್ತಿಸಿ ಬರೆದರು. Comb, bin, in,



nation, tin, nat, action, cat, bat, mat, cob, tan, on, no, nib.

ನಾಲ್ಕೈದು ಮಕ್ಕಳು ತೋಚಿದಂತೆ ಬರೆದು ಓದಿದಾಗ ಇದು ಎಂಥಾ ಬೌದ್ಧಿಕ ವ್ಯಾಯಾಮ ಎನ್ನಿಸಿತು. ಬಿ.ಬಿ.ಸಿ.ಯಲ್ಲಿ ಪ್ರಸಾರವಾಗುವ ಇನ್ನೊಂದು ಬೌದ್ಧಿಕ ವ್ಯಾಯಾಮ ಪ್ರಶ್ನೋತ್ತರ. ಒಬ್ಬ ಕೇಳುಗ ತನ್ನ ಮನಸ್ಸಿನಲ್ಲಿ ಒಂದು ವಸ್ತುವನ್ನು ಗುರುತಿಸಿಕೊಂಡು ಅದು ಪ್ರಾಣಿವರ್ಗ, ಸಸ್ಯವರ್ಗ ಅಥವಾ ಲೋಹಕ್ಕೆ ಸಂಬಂಧಿಸಿದ್ದು ಎಂದು ಹೇಳುವನು. ಕೇವಲ ಇಪ್ಪತ್ತು ಪ್ರಶ್ನೋತ್ತರದೊಳಗೆ ಉತ್ತರಿಸಿದರೆ ವಿದ್ಯಾರ್ಥಿಗಳು ಗೆದ್ದಂತೆ, ಇಲ್ಲವಾದರೆ ಸಂದರ್ಶಕ ಗೆದ್ದಂತೆ. ಈ ವಿಭಾಗದಲ್ಲಿ ಜಗತ್ತಿನ ವಿವಿಧ ಜ್ಞಾನಗಳ, ವ್ಯಕ್ತಿಗಳ ಮಂಥನ ನಡೆದು ರೇಡಿಯೋ ಕೇಳುವವರೂ ಅಷ್ಟೇ ವಿಚಾರಕ್ಕೆ ತೊಡಗುತ್ತಾರೆ. ನಮ್ಮ ರೇಡಿಯೋಗಳಲ್ಲಿ ಸಿನಿಮಾ ಹಾಡುಗಳಿಗೆ ಇರು ವಷ್ಟು ಬೇಡಿಕೆ ಇನ್ನಾವುದಕ್ಕೂ ಇಲ್ಲ. ಹೊಸಹೊಸ ಕನ್ನಡ ಪದಗಳನ್ನು, ಇಂಗ್ಲೀಷ್ ಪದಗಳನ್ನು ಅವುಗಳ ಬಳಕೆಯನ್ನು ರೇಡಿಯೋನಲ್ಲಿ ಕಲಿಸಿದರೆ ಜನರ ಸಾಹಿತ್ಯ ಪ್ರೌಢಿಮೆ ಹೆಚ್ಚುವುದರಲ್ಲಿ ಸಂಶಯವಿಲ್ಲ. ಪ್ರತಿಯೊಂದು ಜ್ಞಾನಾರ್ಜನೆಯ ಮಾರ್ಗ ದಲ್ಲಿ ನಾವು ಹಿಂದುಳಿದಿದ್ದೇವೆ ಎಂದು ವ್ಯಥೆಯಾಗದಿರದು.

### ಮಾನವೀಯತೆ

ಭಾರತದಷ್ಟು ಬದುಕು ಅಲ್ಲಿ ಸರಳವಿಲ್ಲ; ಕಾರಣ ಹವೆ. ಒಂದು ಲುಂಗಿ, ಅಂಗಿ ಯನ್ನು ತೊಟ್ಟು, ಚಾಪೆಯ ಮೇಲೆ ಮಲಗಿ ಕಾಲ ಕಳೆಯುವ ಸಾಧ್ಯತೆ ಇಲ್ಲಿದೆ. ಅಲ್ಲಿಯ ತಂಪಿನಿಂದಾಗಿ ಮೈತುಂಬ ಬಟ್ಟೆ ಬೇಕೇ ಬೇಕು. ನಾವು ಬರಿಗಾಲಿನಿಂದ ಮನೆಯಲ್ಲಿ ಓಡಾಡುತ್ತೇವೆ. ಅಲ್ಲಿ ಸಾಧ್ಯವೇ ಇಲ್ಲ; ಬೂಟು ಬೇಕೇ ಬೇಕು. ಮೈಯನ್ನು ಕಾವೇರಿಸಲು ಹೀಟರ್‌ಗಳಿಗೆ, ವಿದ್ಯುತ್ತಿಗೆ ಬಹುಪಾಲು ಹಣ ಅಲ್ಲಿ ವ್ಯಯ. ಈ ಯಾವ ವಿಕೋಪಗಳೂ ಬಹುಜನ ಭಾರತೀಯರಿಗೆ ಇಲ್ಲ. ಚಳಿಗಾಲದಲ್ಲಿ ಅಲ್ಲಿ ರಾತ್ರಿ ಹೊದೆಯಲು ಇಲ್ಲದೆ ಹೊರಗೆ ಇದ್ದರೆ ಬೆಳಿಗ್ಗೆಗೆ ಜೀವಂತವಾಗಿ ಸಿಗುವುದೇ ಕಷ್ಟ. ಆದ್ದರಿಂದ ಸರ್ಕಾರದ ಹೊಣೆ ಬಹಳ. ಬ್ರಿಟನ್ನಿನ ನಾಗರೀಕನು ಯಾವುದೇ ಉದ್ಯೋಗ ವಿಲ್ಲದೆ ಇದ್ದಾಗ Social Security Fund (ಸಮಾಜ ಭದ್ರತಾ ನಿಧಿ)ಯಿಂದ ವಾರಕ್ಕೆ ಹದಿನೆಂಟು ಪೌಂಡು ಯಾವ ಶಿಫಾರಸು ಇಲ್ಲದೆ ಕೊಡುವರು. ಒಂದು ಕೆಲಸ ವಾಗಬೇಕಾದರೆ ಅವರಿವರ ಪತ್ರ, ಶಿಫಾರಸು, 'ಖುಷಿ' ಮುಂತಾದ ಕೆಂಪು ಟೇಪಿನ ಸುತ್ತು ಬಳಸಿನ ಹಾದಿ ಇಲ್ಲಿಲ್ಲ. ಕೇವಲ ಪತ್ರ ವ್ಯವಹಾರದ ಮೇಲೆಯೇ ನ್ಯಾಯ ದೊರೆಯುವುದು. ಈ ಹದಿನೆಂಟು ಪೌಂಡುಗಳು ಅಂದರೆ ತಿಂಗಳಿಗೆ ೭೨ ಪೌಂಡುಗಳ ಸುರಕ್ಷಣಾ ನಿಧಿ ಇಲ್ಲಿಯ ಮಟ್ಟಕ್ಕನುಗುಣವಾಗಿ ಸುಖವನ್ನು ಕೊಡಲಾರದಾದರೂ, ಯಾವನೇ ನಿರುದ್ಯೋಗಿ ಉಪವಾಸದಿಂದ, ಛಳಿಯಿಂದ ನೆಮ್ಮದಿಯಲ್ಲಿ ಇರಿಸುವುದು.

ಸಾಯಬೇಕಾದ ಪ್ರಸಂಗ ಬರದು. ಅವನಿಗೆ ಉದ್ಯೋಗ ದೊರೆತ ತಕ್ಷಣವೇ ಅವನು ಪ್ರಾಮಾಣಿಕವಾಗಿ ಸರ್ಕಾರಕ್ಕೆ ತಿಳಿಸಿ, ನಂತರ ಆ ಹಣವನ್ನು ಪಡೆಯಕೂಡದು. ಜನರು ಆ ಪ್ರಾಮಾಣಿಕತೆಯನ್ನು ಕಾಪಾಡಿಕೊಳ್ಳುವರು. ಸುಳ್ಳು ಹೆಸರು, ಖೊಟ್ಟಿ ಪತ್ರ, ಶಿಫಾರಸುಗಳಿಂದ ನಮ್ಮಲ್ಲಿಯಂತೆ ದುರುಪಯೋಗ ಪಡೆದುಕೊಳ್ಳುವುದಿಲ್ಲ. ಜೇಲನ್ನು ಸ್ವಾತಂತ್ರ್ಯ ಹೋರಾಟಗಾರರಾಗಿ ಅನುಭವಿಸಿದವರಿಗೆ ವಿಶ್ರಾಂತಿ ವೇತನ ಕೊಡುತ್ತೇವೆಂದು ನಮ್ಮ ಸರ್ಕಾರ ಸಾರಿದಾಗ, ಅನೇಕ ಆರೋಪಿ ಖೈದಿಗಳೂ ಸಹ ಸ್ವಾತಂತ್ರ್ಯ ಹೋರಾಟಗಾರರೆಂದು ಅರ್ಜಿ ಸಲ್ಲಿಸಿ ಹಣ ಪಡೆದುದನ್ನು ನಾವು ಕಂಡಿಲ್ಲವೆ ? ಆ ಜನರ ನರನಾಡಿಗಳಲ್ಲಿ ಈ ಪ್ರಾಮಾಣಿಕ ಪ್ರಜ್ಞೆ ಹರಿಯುತ್ತಿದೆ. "ಎಲ್ಲಕ್ಕೂ ಸರ್ಕಾರವನ್ನೇಕೆ ದೂಷಿಸಬೇಕು. ಸರ್ಕಾರವು ಒಂದು ಸಾಧನ. ಆದರ ಧ್ಯೇಯೋದ್ದೇಶಗಳನ್ನು ಆಚರಣೆಗೆ ತರುವವರು ನಾವಷ್ಟೇ !" ಇದು ನಾಗರೀಕರು ಆಡುವ ಮಾತು.

ಒಂದು ಬಗೆಯ ತೂಕ, ಪ್ರೌಢಿಮೆ, ಘನತೆಯನ್ನು ಉಭಯತರಲ್ಲಿ ಅಂದರೆ ಸರ್ಕಾರ–ನಾಗರೀಕರಲ್ಲಿ ಕಾಣುತ್ತೇವೆ. ಒಂದು ದೊಡ್ಡ ಉದ್ದಿಮೆಯ ಚೇರ್ಮನ್ನನು ಕಳೆದ ವರ್ಷ ಸಂಸ್ಥೆಗೆ ರಾಜೀನಾಮೆ ಕೊಟ್ಟ. ಆ ಉದ್ದಿಮೆಯ ಅರ್ಧಕ್ಕಿಂತ ಹೆಚ್ಚಿನ ಬಂಡವಾಳ ಅವನದು. ಆದರೆ, ಇತರ ಸದಸ್ಯರು ಅವನ ನೇತೃತ್ವವನ್ನು ಇಚ್ಛಿಸಲಿಲ್ಲವಾದ ಕಾರಣ, ನೈತಿಕ ಪ್ರಜ್ಞೆಯಿಂದ ಗೌರವಯುತವಾಗಿ ಹಿಂದೆ ಸರಿದು. ಸಾಯುವತನಕ ಹೇಗಾದರೂ ಅಧಿಕಾರದಲ್ಲಿರಬೇಕೆಂಬ ಅತ್ಯಾಕಾಂಕ್ಷೆ ಆಳುವವರಲ್ಲಿಲ್ಲ; ಅಯ್ಯೋ ಆಳಿಸಿಕೊಳ್ಳಬೇಕೆಂಬ ಅಜ್ಞಾನ ಆಳಿಸಿಕೊಳ್ಳುವವರಲ್ಲಿಲ್ಲ. ತಮ್ಮನ್ನು ಆಳುವ ಅರ್ಥಾತ್ ಪ್ರತಿನಿಧಿಸುವ ವ್ಯಕ್ತಿಯ ಸಂಪೂರ್ಣ ಅರಿವು ಜನತೆಯಲ್ಲುಂಟು. ಸರ್ಕಾರವು ಜನರ ಕಲ್ಯಾಣಕ್ಕಾಗಿ ಏನಾದರೂ ಯೋಜನೆ ಕೈಗೊಂಡರೆ ಹೃತ್ಪೂರ್ವಕವಾಗಿ ಸಹಕರಿಸುವರು, ಪ್ರೋತ್ಸಾಹಿಸುವರು. ಏನಾದರೂ ಸ್ವಾರ್ಥ, ದುರಾಲೋಚನೆ, ಅನ್ಯಾಯ ಕಂಡರೆ ಉಗ್ರವಾಗಿ ಪ್ರತಿಭಟಿಸುವರು. ಈ 'ಪ್ರಜ್ಞೆ'ಯೇ ಗೌರವಯುತ ಪ್ರಜಾಪ್ರಭುತ್ವದ ಯಶಸ್ಸಿಗೆ ನಾಂದಿ.

ನೂರಕ್ಕೆ ನೂರು ಪ್ರಾಮಾಣಿಕತೆಯುಂಟೆಂದು ಹೇಳುವುದು ಅಥವಾ ಅನ್ಯಾಯ–ವಂಚನೆ ನಡೆಯುವುದೇ ಇಲ್ಲ ಎನ್ನುವುದು ಧಾರ್ಷ್ಟ್ಯದ ಮಾತಾದೀತು. ಸಾಮಾಜಿಕ ಭದ್ರತಾ ನಿಧಿಯ ಹಣವನ್ನು ನೌಕರಿ-ಸಿಕ್ಕ ಬಳಿಕವೂ ಬಳಸಿಕೊಂಡ ಪ್ರಸಂಗಗಳು ಬೆರಳ ಮೇಲೆಣಿಸುವಷ್ಟಿವೆ. ಆದರೆ, ಗೊತ್ತಾದ ಬಳಿಕ ಉಗ್ರಶಿಕ್ಷೆ ತಪ್ಪಿದ್ದಲ್ಲ. ಓರ್ವ ವಿಧವೆ, ಮೂರು ಮಕ್ಕಳ ತಾಯಿ ಇದನ್ನು ಪಡೆದಳು. ನೌಕರಿ ಸಿಕ್ಕ ಮೇಲೆ ಪಡೆದುಕೊಳ್ಳುವುದು ನಿಲ್ಲಿಸಲಿಲ್ಲ. ಏಳೆಂಟು ವರ್ಷಗಳ ತನಕ ಪಡೆದಳು. ಆಕೆಯ ವಿರೋಧಿಯೋರ್ವಳು ದೂರು ಸಲ್ಲಿಸಿದಳು. ವಿಚಾರಣೆಯಾಗಿ ದಂಡ ವಿಧಿಸಿದರು. ದಂಡ ತುಂಬಲು ಹಣವಿಲ್ಲದಾಗ ನಾಲ್ಕು ವರ್ಷ ಜೇಲಾಯಿತು. ಮೂರು ಮಕ್ಕಳನ್ನು ತಮ್ಮ ರಕ್ಷಣೆಗೆ ತೆಗೆದುಕೊಂಡ ಸರ್ಕಾರವು ತಾಯಿಯನ್ನು ಜೇಲಿಗೆ ಕಳಿಸಿತು. "ನ್ಯಾಯದ ತಕ್ಕಡಿ ಎಲ್ಲಕ್ಕಿಂತ ದೊಡ್ಡದು ; ಎಲ್ಲರೂ ತಲೆಬಾಗಬೇಕು" ಎಂಬ ಅರಿವು ದೇಶದ ಘನತೆಗೆ ಸಾಕ್ಷಿ! ಇಂಥ ಶಿಕ್ಷೆಗಳನ್ನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ ಎಂಬ ಪ್ರಜ್ಞೆ ಇರುವುದರಿಂದ ಅಪ್ರಾಮಾಣಿಕ ಪ್ರಸಂಗ ಬಹು ದುರ್ಲಭ. ಅಂತೆಯೇ ಭಾರತೀಯ ಸ್ತ್ರೀಯೋರ್ವಳ ಅನುಭವ ಮನನೀಯ. ಗಂಡನು ಉದ್ದಿಮೆದಾರನಾಗಿ ಬಂದಾಗ ಭಾರತದಿಂದ ಲಕ್ಷ್ಮಿಯೂ ಪತಿಯನ್ನನುಸರಿಸಿದಳು. ಇಲ್ಲಿಯ ವಿಲಾಸ ಜೀವನಕ್ಕೆ ಒಗ್ಗಿಕೊಂಡ ಆತ ಹೆಂಡತಿಯನ್ನು, ಒಂದು ಮಗುವಿನೊಡನೆ ತ್ಯಜಿಸಿ, ಬೇರೆ ಹುಡುಗಿಯೊಡನೆ ಇರತೊಡಗಿದ. ಭಾರತಕ್ಕೆ ಮರಳಲು ಹಣವಿಲ್ಲ, ದುಃಖಿತ ಸ್ಥಿತಿಯಲ್ಲಿ ಬರಲು ಮನಸ್ಸು ಇಲ್ಲ. ಆ ದೇಶದ ನಾಗರೀಕತ್ವ ಸ್ವೀಕರಿಸಿದಳು. ಆಗ ಸರ್ಕಾರವು ಸಹಾಯಕ್ಕೆ ಬಂದು ಮೊದಲು ಸಾಮಾಜಿಕ ಭದ್ರತಾ ನಿಧಿಯಿಂದ ಹಣ ನೀಡಿ, ನಂತರ ನೌಕರಿಯನ್ನೂ ಕೊಟ್ಟು, ಅತಿ ಕಡಿಮೆ ಬಾಡಿಗೆಯಲ್ಲಿ ಮನೆಯನ್ನು ಕೊಟ್ಟು, ಮಗನನ್ನು ಉತ್ತಮ ದರ್ಜೆಯ ಸ್ಕೂಲಿಗೆ ಸೇರಿಸಿ ಉಚಿತ ವಿದ್ಯಾಭ್ಯಾಸಕ್ಕೆ ಅನುಕೂಲಮಾಡಿತು. ಆಕೆ ನನ್ನ ಮುಂದೆ ಉದ್ಗರಿಸಿದಳು, "ನಾನು ಓದಿರುವ ದೃಷ್ಟಿಯಿಂದ (ಕೇವಲ ಪ್ರೈಮರಿ ನಾಲ್ಕನೇ ಕ್ಲಾಸು) ನಮ್ಮ ದೇಶದಲ್ಲಿ ಆಗಿದ್ದರೆ ಉಪವಾಸ ಸಾಯಬೇಕಿತ್ತು. ಆದರೆ, ಇಲ್ಲಿಯ ಕೌನ್ಸಿಲ್ ನನಗೆ ಸಹಾಯ ಮಾಡಿತು. ಆದಕ್ಕೆ ನಾನು ಕೃತಜ್ಞಳಾಗಿದ್ದೇನೆ...." ಇದು ಹೀಗೆ ಸರ್ಕಾರಕ್ಕೆ ಜನರ ಬಗ್ಗೆ ಅನುಕಂಪ; ಜನರಲ್ಲಿ ಸರ್ಕಾರದ ಬಗ್ಗೆ ಕೃತಜ್ಞತೆ. 'ದೇಶವೆಂಬ ಯಂತ್ರದಲ್ಲಿ ಅತ್ಯಾವಶ್ಯವಾಗಿ ಬೆಳೆದು ಬರಬೇಕಾದ ಮಧುರ ಸಂಬಂಧ. 'ದೇಶವೆಂಬ ಯಂತ್ರದಲ್ಲಿ ವ್ಯಕ್ತಿಯು ಒಂದು ಸ್ಕ್ರೂ; ತನ್ನ ಸ್ವಾತಂತ್ರ್ಯವನ್ನು ಬದಿಗೊತ್ತಿ ಬದುಕಬೇಕು' ಎಂಬ ಕ್ರೂರಸತ್ಯವುಳ್ಳ ರಾಜಕೀಯ ಸಿದ್ಧಾಂತವಿದಲ್ಲ. 'ದೇಶವೆಂಬ ತೋಟದಲ್ಲಿ ಪ್ರತಿಯೋರ್ವನೂ ಒಂದು ಹೂವು–ಒಂದು ಗಿಡ. ಅದು ಪ್ರಫುಲ್ಲಿತವಾಗಿದ್ದರೆ ತೋಟವು ಚೆಂದ.' ಈ ತತ್ತ್ವವೇ ನಿಜವಾದ ಪ್ರಜಾಪ್ರಭುತ್ವ. ಈ ಅನುಭವವನ್ನು ನಾನಿಲ್ಲಿ ಪಡೆದೆ.

(ಸಶೇಷ)

### ಅನುಭವ ವಾಣಿ

## ನಂಬಿಕೆ

ಎಲ್ಲರನ್ನೂ ಪ್ರೀತಿಸು, ಆದರೆ ಕೆಲವರನ್ನು ಮಾತ್ರ ನಂಬು.

೧. ಪರಸ್ಪರರಲ್ಲಿ ನಂಬುಗೆ ಇಲ್ಲದಿದ್ದರೆ ಪ್ರೇಮಕ್ಕೆ ಬೆಲೆಯೇ ಇಲ್ಲ.
೨. ನಂಬಿಗೆ–ಶ್ರದ್ಧೆಯಿಲ್ಲದೆ ಬದುಕುವುದೇ ಸಾಧ್ಯವಿಲ್ಲ. ಅದಿಲ್ಲದ ಬಾಳು ಅಂಬಿಗನಿಲ್ಲದ ದೋಣಿಯಂತೆ.
೩. ನೋಡಿದುದರಲ್ಲಿ ಅರ್ಧ ನಂಬು, ಕೇಳಿದುದರಲ್ಲಿ ಏನನ್ನೂ ನಂಬ ಬೇಡ.
೪. ನಂಬಿಕೆಯೇ ಜೀವನ; ಅಪನಂಬಿಕೆಯೇ ಮೃತ್ಯು.

ಸಂ: **ಸರೋಜ ನಾಯಕ್.**

# ಜಾತಿಗಳ ಅಳಿವು-ಉಳಿವು

## (ವಿಚಾರ ಮಂಥನ)

(ಜನವರಿ ತಿಂಗಳ ಕಲ್ಯಾಣ ಕಿರಣ ಮಾತೃಹರಕೆಯಲ್ಲಿ ಓದುಗರ ಮುಂದೆ ಒಂದು ಸಮಸ್ಯೆಯನ್ನಿಟ್ಟು, ಚಿಂತನೆಗೈಯಲು ಅವಕಾಶ ನೀಡಲಾಗಿತ್ತು. ಆ ದಿಶೆಯಲ್ಲಿ ಬಂದ ಕೆಲವು ಪತ್ರಗಳನ್ನು ಪ್ರಕಟಿಸಲಾಗಿದೆ. ಮುಂದಿನ ಸಂಚಿಕೆಗೂ ಅವಕಾಶವಿದೆ. ಓದುಗರು ಅಭಿಪ್ರಾಯ ತಿಳಿಸಬೇಕು.)

### ೧. ಜಾತಿ ವ್ಯವಸ್ಥೆ ಉತ್ತಮ ಪದ್ಧತಿ

**ಡಾ || ಹೆಚ್. ಬಸವರಾಜಪ್ಪ, ಬೆಂಗಳೂರು.**

ಸತ್ಯವನ್ನು ತರ್ಕದಿಂದ ತಿಳಿಯಲಾಗುವುದಿಲ್ಲ. ಸತ್ಯವನ್ನು ತಿಳಿಯಬೇಕಾದರೆ ತಿಳಿಯಬೇಕಾದ ವಿಷಯದಲ್ಲಿ ಸತತಧ್ಯಾನ, ನಿಧಿಧ್ಯಾಸ ಬೇಕಾಗುವುದು. ಆದ್ದರಿಂದ ಸಮಾಜ ವ್ಯವಸ್ಥೆಯನ್ನು ದೇಹದ ಹುಣ್ಣೆಗಾಗಲೀ, ವಿಷವೃಕ್ಷ ಎಂದಾಗಲಿ ಹೋಲಿಸುವುದು ಸಮಂಜಸವಲ್ಲ.

ಜಾತಿ, ಮತ, ಪಂಥಗಳನ್ನು ಅಳಿಸಲು ಯಾವ ಯುಗದಲ್ಲಿಯೇ ಆಗಲಿ, ಯುಗ ಪುರುಷನಿಂದಾಗಲೀ ಸಾಧ್ಯವಿಲ್ಲದ ಮಾತು ಮತ್ತು ಸಾಧೂವೂ ಅಲ್ಲವೆಂಬುದು ನನ್ನ ಭಾವನೆ.

ಜಾತಿ ಪದ್ಧತಿ ಇರಲೇ ಬೇಕು. ಆದರೆ ಮೇಲು, ಕೀಳು ಸ್ಪೃಶ್ಯಾಸ್ಪೃಶ್ಯ ಭಾವನೆ ಹೇಯವಾದುದು. ಈಗ ಸರಕಾರಿ ಉದ್ಯೋಗಸ್ತರನ್ನು ಒಂದನೇ ವರ್ಗದಿಂದ ನಾಲ್ಕನೇ ವರ್ಗದ ನೌಕರರೆಂದು ವಿಭಾಗಿಸಿಲ್ಲವೇ ? ಇದನ್ನು ಯಾವ ಆಧಾರವಿಲ್ಲದೆಯೇ ಮಾಡಿದ್ದಾರೆಯೇ ? ವಿದ್ಯೆ, ಜ್ಞಾನ, ಪರಿಣತಿ ಮತ್ತು ಸಾಮರ್ಥ್ಯದ ಮೇಲೆ ಮಾಡುತ್ತೇವಲ್ಲವೆ ? ಅದೇ ರೀತಿ ಮತ ಪಂಥಗಳೂ ಕೂಡ ವಿಂಗಡಿಸಲ್ಪಟ್ಟಿವೆ. ಒಂದೇ ವ್ಯತ್ಯಾಸವೆಂದರೆ ನಾಲ್ಕನೇ ವರ್ಗದವನು ವಿದ್ಯಾ ಸಾಮರ್ಥ್ಯಗಳನ್ನು ಹೆಚ್ಚಿಸಿಕೊಂಡು ಒಂದನೇ ವರ್ಗಕ್ಕೆ ಏರಬಹುದು ಆದರೆ ವರ್ಣ ವ್ಯವಸ್ಥೆಯಲ್ಲಿ ಅವಕಾಶವಿಲ್ಲ.



ಅದು ತಪ್ಪು. ಅದನ್ನೇ ಈಗ ಸಮಾಜ ಸುಧಾರಕರು ಮಾಡಬೇಕಾಗಿದೆ. KPSC ಮತ್ತು UPSC ಗಳಿರುವಂತೆ ಎಲ್ಲಾ ಸಮಾಜಗಳಿಂದ ಮಾನ್ಯತೆ ಪಡೆದ ಕೇಂದ್ರ ಸಮಾಜೋನ್ನತಿ ಆಯೋಗ ನೇಮಿತವಾಗಬೇಕು. ಬರು ಬರುತ್ತಾ ಸಮಾಜ ಕಟ್ಟಳೆಗಳು ಸಡಿಲವಾಗಿರುವುದರಿಂದ ಜಾತಿಗಳು ಒಡೆದು ನುಚ್ಚು ನೂರಾಗುತ್ತಿರುವುದು, ಗೋಚರವಾಗುವುದು ಶುಭಲಕ್ಷಣವೇನಲ್ಲ.

ಅಣುವನ್ನು ಒಡೆಯುತ್ತಾ ಹೋದಂತೆ, ಇನ್ನು ಮುಂದೆ ಒಡೆಯಲಾರದ ಸ್ಥಿತಿಗೆ ಬರುವುದು ; ಆಗ ಅದನ್ನು ಒಡೆದಾಗ ಸ್ಫೋಟವಾಗುವುದು. ಇದೇ ರೀತಿ ಸಮಾಜ ವ್ಯವಸ್ಥೆಯನ್ನು ಒಡೆಯುತ್ತಾ ಹೋದರೆ ಒಂದು ದಿನ ಸ್ಫೋಟವಾಗುವುದು. ಆಗ ಯಾರಿಂದಲೂ ನಿಯಂತ್ರಿಸುವುದು ಸಾಧ್ಯವಾಗದೆ ಅವ್ಯವಸ್ಥೆ, ಅರಾಜಕತೆ, ಅನೈತಿಕತೆ ಉಂಟಾಗಿ ಮಾನವನ ಜೀವನವೇ ಒಂದು ಶಾಪವಾಗಿ ಪರಿಣಮಿಸುವುದು.

ಮಂಗಳೂರಿನ ವಾಸುದೇವ ಕಾರಂತರ ಜಾತಿ ವ್ಯವಸ್ಥೆ ವಿಚಾರಗಳು ಒಪ್ಪತಕ್ಕಂತಹುದೇ ಆದರೂ ದೇವರೇ ಜಾತಿಗಳನ್ನು ನಿರ್ಮಿಸಿದ್ದಾನೆಂದು ಹೇಳುವುದು ಅತ್ಯಂತ (Out dated) ಹಳೆಯ ವಿಚಾರ, ಆದರೂ ಸಮಾಜ ವ್ಯವಸ್ಥೆ ಇಲ್ಲದ ಕಾಡು ಜನರ ಮುಂದಿನ ಸುಧಾರಣೆಯೇ ಜಾತಿ-ವ್ಯವಸ್ಥೆ ಎಂದು ಹೇಳಬಹುದು. ಜಾತಿ ವ್ಯವಸ್ಥೆಯನ್ನು ನಿರ್ಮೂಲ ಮಾಡುವುದೆಂದರೆ ಕಾಡು ಜನರ ಜೀವನವನ್ನು ಆಹ್ವಾನಿಸಿದಂತೆಯೇ ಸರಿ. ಆ ರೀತಿಯ ಸಂಸ್ಕಾರದಿಂದ ಬಂದವರು ಮಾತ್ರವೇ ಕೆಡಿಸುವ, ಅಳಿಸುವ, ವಿಚಾರ ಮಾಡುವರು. 'ಕುಣಿಯಲು ಬಾರದವರು ಅಂಗಳ ಚೆನ್ನಾಗಿಲ್ಲ' ಎಂಬಂತೆ, ಕಾಮಾಲೆಯಾದ ಕಣ್ಣಿಗೆ ಜಗತ್ತೇ ಹಳದಿಯಾಗಿ ಕಾಣುವ ಹಾಗೆ, ಜಾತಿ ವ್ಯವಸ್ಥೆಯು ವಿಷ ವೃಕ್ಷವಾಗಿ ಕಂಡುದರಲ್ಲಿ ಏನೂ ಆಶ್ಚರ್ಯವಿಲ್ಲ.

ಜಾತಿಗಳು ಇರಬೇಕೇ ಬೇಡವೇ ಎನ್ನುವುದಕ್ಕೆ ಜಾತಿ ಮತ್ತು ಅಂತರ್ಜಾತಿ ವಿವಾಹಗಳನ್ನು ಮೂಲಮಾನವಾಗಿ ತೆಗೆದುಕೊಂಡು ನೋಡಿದಾಗ ಅಂತರ್ಜಾತಿ ವಿವಾಹಗಳು ಹೆಚ್ಚು ಶೇಕಡ ಅಯಶಸ್ವಿಯಾಗಿಯೂ, ಜಾತಿ ವಿವಾಹಗಳು ಹೆಚ್ಚು ಶೇಕಡ ಯಶಸ್ವಿಯಾಗಿರುವುದು ಕಂಡು ಬರುತ್ತದೆ. ಉದಾಹರಣೆಗೆ ಹೇಳಬೇಕಾದರೆ ನೇಕಾರನೊಬ್ಬ ಕಮ್ಮಾರ ಹುಡುಗಿಯನ್ನು ಲಗ್ನವಾದರೆ ಬಟ್ಟೆಯ ಬದಲು ನೇಣುಹಗ್ಗವನ್ನೇ ನೇಯಬೇಕಾದೀತು. ಕುಲ ಕಸುಬು ಅಲ್ಲವಾದ್ದರಿಂದ ಕಮ್ಮಾರ ಹುಡುಗಿಗೆ ನೇಯ್ಗೆ ಕಲಿಯಲು ಬಹಳ ದಿವಸ ಹಿಡಿಯುವುದು. ಪರಿಣಾಮವಾಗಿ ಅರ್ಥ ವ್ಯವಸ್ಥೆ ಹಾಳಾಗುವುದು. ಈ ಆರ್ಥಿಕ ಮುಗ್ಗಟ್ಟು ಅನೈತಿಕತೆಗೆ ದಾರಿ ಮಾಡಿ ಕೊಡುವುದು. ಅನೈತಿಕತೆಯು ಸಾಮಾಜಿಕ, ಧಾರ್ಮಿಕ ಧ್ಯೇಯಗಳನ್ನು ಮಣ್ಣುಪಾಲು ಮಾಡುವುದು. ಆದ್ದರಿಂದಲೇ ಸಾಧನೆಗಳಲ್ಲಿ (ಧರ್ಮ, ಅರ್ಥ, ಕಾಮ, ಮೋಕ್ಷ) ಅರ್ಥವು ಎರಡನೇ

ಪ್ರಾಮುಖ್ಯ ಸ್ಥಾನವನ್ನು ಪಡೆದಿರುವುದು. ಅಂದಮೇಲೆ ಜಾತಿ ವಿವಾಹವು ಹಿತಕರವೂ ಸುಖಕರವೂ ಆದ್ದರಿಂದ ಜಾತಿ ಇರುವುದು ಅವಶ್ಯಕ ಎಂದಂತಾಯಿತು. ಯೌವ್ವನದ ಭರದಲ್ಲಿ ಹಿರಿಯರ ಕಿವಿ ಮಾತನ್ನು ಕೇಳದೆ ಆದ ಅಂತರ್ಜಾತಿ ದಂಪತಿಗಳ ಜೀವನವು ಭಗ್ನ ಮಂದಿರವಾಗಿ ಪರಿಣಮಿಸಿದೆ. ಇತ್ತೀಚಿನ ಕಾಲದಲ್ಲಿ ಅತ್ಯುನ್ನತ ಸಾಧನದಲ್ಲಿದ್ದ ವ್ಯಕ್ತಿಯನ್ನು ಉದಾಹರಣೆಗೆ ತೆಗೆದುಕೊಳ್ಳಬಹುದಾಗಿದೆ. ಜಾತಿ ಮತ ಪಂಥಗಳು ಪವಿತ್ರವಾದುವುಗಳು. ಇವು ಮೋಕ್ಷದ ದಾರಿಗಳು. (ಬೇರೆ ಬೇರೆ ಮಾರ್ಗದಿಂದ ಬೆಂಗಳೂರಿಗೆ ಬರುವಂತೆ) ಬೆಂಗಳೂರಿಗೆ ಬಂದವರು ವಿಷಯ ಲೋಲುಪತೆಯಲ್ಲಿ ಜನರು ಬೀಳುವರೆಂದು ಬೆಂಗಳೂರಿಗೆ ಬರುವ ಮಾರ್ಗವನ್ನೇ ಕಿತ್ತಿ ಹಾಕಬೇಕೆ ? ಅಥವ ವಿಷಯ ಲಂಪಟತನಕ್ಕೆ ಅವಕಾಶವಿರುವ ಬಾರ್, ಕ್ಲಬ್ಬು, ವೇಶ್ಯಾಗೃಹಗಳನ್ನು ನಿಯಂತ್ರಿಸಬೇಕೆ ? ಎಂದು ನಾನು ಶ್ರೀ ಅಂಬೇಡ್ಕರ್ ವಾದಿಗಳನ್ನೂ ವಿನಯದಿಂದ ಕೇಳುತ್ತೇನೆ.

"ಮಾನವ ಜನ್ಮ ಬಹು ದೊಡ್ಡದು"– ಶರೀರ ಮಾದ್ಯಂ ಖಲು ಧರ್ಮ ಸಾಧನಂ. ಧರ್ಮ ಸಾಧನೆಗೆ ಶರೀರ ಆರೋಗ್ಯವಾಗಿರಬೇಕೆಂದು ಕಾಳಿದಾಸನು ಹೇಳುತ್ತಾನೆ. ದೇಹ ಆರೋಗ್ಯವಾಗಿರಬೇಕಾದರೆ ಮಿತ ಆಹಾರ–ವಿಹಾರಗಳಿರಬೇಕು. ಈ ಪವಿತ್ರವಾದ ಆಹಾರದಿಂದ ಹೇಯವಾದ ಮಲವು ಉತ್ಪನ್ನವಾಗುವುದು. ಗಾಂಧೀಜಿಯವರ ವಾದದಂತೆ ಗುದವನ್ನೇ ಕಡಿದು ಹಾಕಬೇಕೆಂದಾದರೆ ಶ್ರೀ ಅಂಬೇಡ್ಕರರ ವಾದದಂತೆ ಪವಿತ್ರವಾದ ದೇಹದಿಂದ ಹೇಯ ಮಲವು ಉತ್ಪನ್ನವಾಗುವುದರಿಂದ ದೇಹವನ್ನೇ ನಾಶಮಾಡಿರಿ ಎಂದಂತಾಯಿತು.

"ಕತ್ತಿಯು ಒಬ್ಬರ ಕತ್ತನ್ನು ಕೊಯ್ಯಲೂ ಬರುವುದು. ಮತ್ತು ಉರುಲು ಹಾಕಿಕೊಂಡವರ ಹಗ್ಗವನ್ನು ಕೊಯ್ದು ಜೀವ ಉಳಿಸಲೂ ಬರುವುದು." "ನೋಡುವ ಭಾವದಲ್ಲಿ ಬಳಸುವ ಪರಿಯಲ್ಲಿ ಹೇಯ–ಶ್ರೇಯ ವೆಂಬುದಲ್ಲದೆ ಆ ಪದಾರ್ಥಲ್ಲಿಲ್ಲ ಕಾಣಾಬಾಗಿ" ಎನ್ನುತ್ತಾರೆ ಶ್ರೀ ದಿವಾಕರರು.

ಬ್ರಾಹ್ಮಣ ಸಮಾಜದಲ್ಲಿ ಮಹಿಳೆಯು ತಿಂಗಳಲ್ಲಿ ಮೂರು ದಿನ ಅಸ್ಪೃಶ್ಯಳಾಗುತ್ತಾಳೆ. ಮಡಿಯಾಗಿ ಪೂಜೆಗೆ ಅಣಿಯಾದ ಜಂಗಮರೂ ಆಚಾರಿಗಳೂ ತಮ್ಮ ಮನೆಯವರನ್ನೇ ಮುಟ್ಟುವುದಿಲ್ಲ. ಅಂದರೆ ಅವರಿಗೆ ಉಳಿದವರೆಲ್ಲ ಅಸ್ಪೃಶ್ಯರು. ಧರ್ಮದ ನೆಲೆ ಬೀಡಾದ ಭಾರತದಲ್ಲಿ ಧರ್ಮಾಚರಣೆಗೆ ಅವಕಾಶವಿಲ್ಲವೇ ?

ಸಮಾಜ ವ್ಯವಸ್ಥೆ ಹೇಗಿರಬೇಕು ? ಜಾತಿಯಲ್ಲಿ ಈಗಿರುವ ಒಳ ಜಾತಿಗಳನ್ನು ಮೊದಲು ತೆಗೆಯಬೇಕು. ಜಾತಿ ಕಾಯಕಗಳನ್ನೇ ಹೆಚ್ಚಾಗಿ ಅವಲಂಬಿಸ ಬೇಕು.



ಮತ್ತು ವಿವಾಹಗಳು ಸಜಾತೀಯವಾಗಿರಬೇಕು. ಅಂತರ್ಜಾತಿ ವಿವಾಹಗಳನ್ನು ಬಹಿಷ್ಕರಿಸಬೇಕು.

ಸಮಾಜದಲ್ಲಿ ಮೇಲು–ಕೀಳು, ಸ್ಪೃಶ್ಯಾಸ್ಪೃಶ್ಯತೆ ಇರಲೇ ಬಾರದು. ಹಾಗೆ ವರ್ತಿಸಿದವರಿಗೆ ಶಿಕ್ಷೆಯಿರಬೇಕು. ಉದ್ಯೋಗ (ನೌಕರಿ ಗಳನ್ನು ಕೊಡುವಾಗ ಆಯಾಜಾತಿ ಕಾಯಕದವರಿಗೇ ಹೆಚ್ಚಿನ ಪ್ರಾತಿನಿಧ್ಯ ಕೊಡಬೇಕು. ಸಾಮಾನ್ಯ ಹುದ್ದೆ (general) ಗಳಿಗೆ ಜಾತಿ ಅನುಪಾತಗಳ ಆಧಾರದ ಮೇಲೆ ಕೊಡತಕ್ಕದ್ದು. ಸದ್ಯ ಪ್ರಚಲಿತವಿರುವ ಅಪಹಾಸ್ಯ ಅರ್ಥ ವ್ಯವಸ್ಥೆಯಾದ, ಮಹಡಿಯ ಮನೆಯಲ್ಲಿ ಅಜೀರ್ಣದಿಂದ ಸತ್ತರೆ ಪಕ್ಕದ ಗುಡಿಸಲಲ್ಲಿ ಉಪವಾಸದಿಂದ ಸಾಯುವ ವ್ಯವಸ್ಥೆ ತೊಲಗಿ, ಬಡವ ಬಲ್ಲಿದರ ಅಂತರ ಕಡಿಮೆಯಾಗಬೇಕು. ಪ್ರತಿಯೊಂದು, ಮತ ಪಂಥದ ಕಾರ್ಯಾಲಯ ಇದ್ದು ಅದು ಸರ್ವ ಸದಸ್ಯರ ಮಾಹಿತಿಯನ್ನು ಸಂಗ್ರಹಿಸಿ, ಉದ್ಯೋಗ, ವಿದ್ಯೆ, ವಿವಾಹ, ಆರ್ಥಿಕ ನ್ಯಾಯ, ವೈದ್ಯಕೀಯ ವ್ಯವಸ್ಥೆಯನ್ನು ಮಾಡಬೇಕು. ಮಕ್ಕಳಿಗೆ ಸರಕಾರಿ ಶಿಕ್ಷಣಕ್ಕೆ ಮುಂಚೆ ಧರ್ಮದ ಶಿಕ್ಷಣ ಕೊಡುವ ವ್ಯವಸ್ಥೆ ಆಗಬೇಕು.

ಒಟ್ಟಿನಲ್ಲಿ ಜಾತಿಯನ್ನು ಮೇಲು–ಕೀಳು ಎಂದು ಅಳೆಯುವ ಮಾನದಂಡ ಮಾಡದೆ ಜೀವನದಲ್ಲಿ ಸುಖ ಶಾಂತಿ ಸಮೃದ್ಧಿಗಾಗಿ ಧರ್ಮ ಮೋಕ್ಷಕ್ಕೆ ಸಾಧನವನ್ನಾಗಿ ಮಾಡಿಕೊಳ್ಳಬೇಕು. ಈ ಗುಟ್ಟನ್ನು ತಿಳಿಸಲು ಸಮರ್ಥ ಗುರುಗಳು ಬೇಕು. ಅಂತಹ ಕಾರ್ಯಕ್ಕೆ ವಿಶ್ವಗುರು ಬಸವೇಶ್ವರರು ಮತ್ತೊಮ್ಮೆ ಅವತರಿಸಿ ಬರಲಿ. ಸರ್ವೇ ಜನಾಃ ಸುಖಿನೋ ಭವಂತು–ಆಗಲಿ.

## ೨. ಜಾತಿಗಳ ಸಂಪೂರ್ಣ ಅಳಿವು ಅತ್ಯಾವಶ್ಯಕ

ಹಂಸವೇಣಿ. ವಿ. ಶಿವಮೊಗ್ಗ.

ನನ್ನ ಅಭಿಪ್ರಾಯದಲ್ಲಿ ಜಾತಿಗಳ ಉಳಿವು ಅನಾವಶ್ಯಕ. ಅದರ ಸಂಪೂರ್ಣ ಅಳಿವು ಅತ್ಯಾವಶ್ಯಕ.

ಯಾವುದೇ ಒಂದು ರಾಷ್ಟ್ರದ ಪ್ರಗತಿ, ಸಮಾಜದ ಸುಧಾರಣೆ, ಮತ್ತು ಜನತೆಯ ಕಲ್ಯಾಣ–ಈ ಮೂರು ಒಂದು ಧರ್ಮದ ಭದ್ರವಾದ ತಳಹದಿಯ ಮೇಲೆ ರೂಪಿಸಲು ಸಾಧ್ಯವೇ ಹೊರತು ಜಾತಿ-ಉಪಜಾತಿಗಳಾಗಿ ಬಿರುಕುಬಿಟ್ಟಿರುವ ಜಾತಿಯ ಅಸ್ಥಿರ ತಳಹದಿಯ ಮೇಲಲ್ಲ ಮಾನವ ತಾನಾಗಿ ನಿರ್ಮಿಸಿಕೊಂಡ ಜಾತಿಯ ಬಲೆಯಲ್ಲಿ ತಾನೇ ಸಿಲುಕಿಕೊಂಡು ಒಳಗಿರಲೂ ಆಗದೆ, ಹೊರಬರಲೂ ಆಗದೆ ಚಡಪಡಿಸುತ್ತಿರುವನು.

1. ದೇಶದಲ್ಲಿ ಶಾಂತಿ, ರಕ್ಷಣೆ, ಜನರ ಹಕ್ಕುಬಾಧ್ಯತೆ, ಐಕ್ಯತಾ ಪ್ರವೃತ್ತಿ—ಇವುಗಳನ್ನು ಕಾಯಲು (ಕಾಪಾಡಲು) **ರಾಷ್ಟ್ರವೂ,**

2. ಅವಶ್ಯವಾದ ಆಹಾರ, ಶಿಕ್ಷಣ, ಉದ್ಯೋಗ—ಇವುಗಳನ್ನು ಕಲ್ಪಿಸಲು **ಸರ್ಕಾರವೂ,**

3. ಅಮೂಲ್ಯವಾದ ಶಿಸ್ತು, ಸಂಯಮ, ಪ್ರಾಮಾಣಿಕತೆ—ಇವುಗಳನ್ನು ಬೆಳೆಸಲು **ಕಾನೂನುಗಳು,**

4. ಜನಾಂಗ ಐಕ್ಯತೆ, ವೈಚಾರಿ ಕಪ್ರಜ್ಞೆ, ಧಾರ್ಮಿಕ ಸ್ವಾತಂತ್ರ್ಯ, ನೈತಿಕ ಮಟ್ಟ—ಇವುಗಳನ್ನು ರಕ್ಷಿಸಲು **ಧರ್ಮವೂ,**

5. ಜನರ ಸುಪ್ತ ಪ್ರತಿಭೆ, ಕಾರ್ಯಕೌಶಲ್ಯ, ಆಸಕ್ತಿ—ಇವುಗಳ ಸದುಪಯೋಗವಾಗುವಂತೆ ಅವಕಾಶ ಕಲ್ಪಿಸುತ್ತಿರುವ **ಸಾಮಾಜಿಕ ಸಂಸ್ಥೆಗಳೂ,**

6. ಸಮಾಜ ಸುಧಾರಣೆಗೆ ಎಲ್ಲಾ ರೀತಿಯಿಂದಲೂ ಶ್ರಮಿಸುತ್ತಿರುವ **ಸಮಾಜ ಸುಧಾರಕರೂ,** ಒಟ್ಟಾಗಿ ಕೆಲಸಮಾಡಿ ಜಾತೀಯತೆ ವಿರುದ್ಧ ಕತ್ತಿ ಹಿರಿಯಬೇಕು.

ಮಾನವರು ಎಷ್ಟು ಅವಿವೇಕಿಗಳೆಂದರೆ, ಜಾತಿಯ ದುರಭಿಮಾನದ ಭ್ರಾಂತಿಯಲ್ಲಿ 'ತಾವೆಲ್ಲರೂ ಮೂಲತಃ ಮಾನವರೇ' ಎಂಬ ವಿಚಾರವನ್ನೇ ಮರೆತು ತಮ್ಮ ವ್ಯಕ್ತಿತ್ವವನ್ನೇ, ಸ್ವಾತಂತ್ರ್ಯವನ್ನೇ, ಜಾತಿಗೆ ಬಲಿಕೊಟ್ಟು ತಾವದರ ದಾಸಾನುದಾಸರಾಗಿ, ಸಮಾಜದಲ್ಲಿ ಅಮಾನುಷವಾಗಿ ವರ್ತಿಸುತ್ತಾ ಮಾನವೀಯತೆಯನ್ನೇ ಮರೆತು ತಮ್ಮ ಅಳಿವಿಗೆ ತಾವೇ ಕಾರಣರಾಗಿದ್ದಾರೆ.

ಮುಖ್ಯವಾಗಿರಬೇಕಾದ ರಾಷ್ಟ್ರಪ್ರೇಮವನ್ನೇ ಮರೆತಿರುವರು. ಇಷ್ಟೊಂದು ಭ್ರಾಂತಿಯನ್ನುಂಟು ಮಾಡಿರುವ ಜಾತಿಗಳು ವ್ಯಕ್ತಿಗೆ, ಸಮಾಜಕ್ಕೆ, ರಾಷ್ಟ್ರಕ್ಕೆ ಮಾರಕವಾಗಿರುವಾಗ, ಅವುಗಳ ಅಳಿವು ಅತ್ಯಾವಶ್ಯಕ.

ಬಹುಶಃ 'ಅಸ್ಪೃಶ್ಯತೆಯು' ಜನನಕ್ಕೆ ಕಾರಣವಾಗಿರುವ ಜಾತಿಯು ಸಂಪೂರ್ಣ ಅಳಿದರೆ ಮಾತ್ರವೇ ದೇಶ, ಸಮಾಜ, ವ್ಯಕ್ತಿ—ಈ ಮೂರು ಸುಭಿಕ್ಷವಾಗಿ ಕಾರ್ಯ ನಿರ್ವಹಿಸಬಹುದೆನಿಸುವುದು. ಆ ಕಾರಣ ಜಾತಿಗಳ ಉಳಿವು ಅನಾವಶ್ಯಕ, ಜಾತಿಗಳ ಸಂಪೂರ್ಣ ಅಳಿವು ಅತ್ಯಾವಶ್ಯಕ, ಎಂದು ನನ್ನ ದೃಢನಂಬಿಕೆ.



## ೩. ಜಾತಿ ಇರಬೇಕು

ಆಧುನಿಕ ಯುಗದಲ್ಲಿ ಸರ್ವರೂ ಸಮಾನರಾಗಬೇಕು ಎಂಬುದಕ್ಕೆ ಪ್ರಯತ್ನಿಸುತ್ತಿದ್ದಾರೆ. ಅದಕ್ಕಾಗಿ ವಿಶ್ವ ಸಂಸ್ಥೆಯೂ ಇದೆ. ಬಹುಪಾಲು ಜನರು ಜಾತಿ ಬೇಡವೆಂದು ಹೇಳುತ್ತಿದ್ದಾರೆ. ಜಾತಿಯ ಅಭಿಮಾನಿಗಳಾಗಿರುವ ಕೆಲವರಲ್ಲಿ ನಾನೊಬ್ಬ.

ಸರ್ವಶಕ್ತನಾದ ಭಗವಂತನು ಜಗತ್ತಿಗೆ ಹಲವು ರೀತಿಯ ವಸ್ತುಗಳನ್ನು ನೀಡಿರುವನು. ಜಡ, ಸಸ್ಯ, ಪ್ರಾಣಿ, ಮಾನವನು ಇತ್ಯಾದಿ. ಪ್ರತಿಯೊಂದನ್ನೂ ಗುರುತಿಸುವ ಸಲುವಾಗಿ ಬೇರೆ ಬೇರೆ ಆಕಾರ, ರೂಪ, ಕ್ರಿಯೆಗಳನ್ನು ಕೊಟ್ಟಿದ್ದಾನೆ. ಆಯಾ ವಸ್ತುಗಳ ಕ್ರಿಯೆ, ರೂಪಗಳಿಗನುಸಾರವಾಗಿ ಅವನ್ನು ಗುರುತಿಸಲು ಅನೇಕ ನಾಮದಿಂದ ಕರೆಯುವರು. ಪ್ರಾಣಿಗಳೆಂದ ಮಾತ್ರಕ್ಕೆ ೪ ಕಾಲಿನ ಜೀವರಾಶಿಗಳೆಲ್ಲಾ ಪ್ರಾಣಿಗಳಾಗಲು ಸಾಧ್ಯವಿಲ್ಲ. ಅದರಲ್ಲೂ ಭೇದವಿದೆ. **ಉದಾ :** ಹುಲಿ, ಚಿರತೆ—ಇವೆರಡರ ರೂಪ, ಕ್ರಿಯೆಗಳಲ್ಲಿ ಅಲ್ಪಮಾತ್ರ ಬದಲಾವಣೆ ಇದೆ. ಆದರೂ ಬೇರೆ ಬೇರೆ ಜಾತಿ ಎಂದು ಪರಿಗಣಿಸಿದ್ದಾರೆ. ಇದೇ ರೀತಿ ಮನುಷ್ಯರಲ್ಲಿ ಭೂಮಿಯ ಹವಾಗುಣಕ್ಕನುಸಾರವಾಗಿ ಮನುಷ್ಯರನ್ನು ನಾನಾ ರೀತಿ ವಿಂಗಡಿಸಬಹುದು. **ಉದಾ :** ಭಾರತೀಯರು, ಚೀನೀಯರು, ಜಪಾನೀ, ಟಿಬೇಟಿಯರ್, ನೀಗ್ರೋ—ಹೀಗೆ ಮಾನವರಲ್ಲೂ ಭೇದವಿದೆ. ಇದು ದೈವೀಕೃತ. ಆದರೆ ಇವು ಜಾತಿಯಲ್ಲದಿದ್ದರೂ, ಅವರ ರೂಪವೇ ಜಾತಿಯಾಗಿದೆ. ಜಾತಿಯ ಮೂಲ ರೂಪವು ಅವರವರ ಕ್ರಿಯೆಯಿಂದ ಒಂದು ಕಡೆ ಬಂದರೆ, ಇನ್ನೊಂದು ಕಡೆಯಿಂದ ಅವರ ಗ್ರಂಥ ಮತ್ತು ನಾಯಕರಿಂದ ಬಂದಿದೆ. ಈಗ ಪ್ರಪಂಚದಲ್ಲಿ ಕ್ರೈಸ್ತ ಮತ್ತು ಮುಸ್ಲಿಂ ಜಾತಿಗಳು ಪೈಪೋಟಿಯಿಂದ ಬೆಳೆಯುತ್ತಿವೆ.

ಇಷ್ಟೆಲ್ಲಾ ಇದ್ದರೂ ಜಾತಿಯು ಕೇವಲ ಗುರುತಿಸುವ ಸಲುವಾಗಿ, ಅಲ್ಲದೆ ಜಾತಿಯಿಂದ ಅವರವರಲ್ಲಿ ಭ್ರಾತೃ ಭಾವನೆ ಬೆಳೆಯುತ್ತದೆ. ತನ್ನ ಜಾತಿ, ತನ್ನ ಕುಲ, ಎಂದು ತನ್ನ ಜಾತಿಯ ಎಲ್ಲರ ಏಳ್ಗೆಗಾಗಿ ದುಡಿಯುತ್ತಾನೆ. ಹೀಗೆ ಪ್ರತೀ ಜಾತಿಯವರೂ ಅವರವರ ಜಾತಿಯ ಅಭಿವೃದ್ಧಿ, ಏಳ್ಗೆ, ಶ್ರೇಯಸ್ಸಿಗಾಗಿ ದುಡಿಯುತ್ತಾರೆ.

ರಾಜ್ಯ ಶಾಸ್ತ್ರದಲ್ಲಿ "ಜಾತಿಯ ಇರುವಿಕೆ"ಯ ಅನುಕೂಲಗಳೇನು ಎಂಬುದನ್ನು ವಿವರವಾಗಿ ಕಾಣಬಹುದು. ಜಾತಿಯಿಂದ ಒಂದು ರಾಜ್ಯ, ಒಂದು ರಾಷ್ಟ್ರ ಒಗ್ಗಟ್ಟಿನಿಂದ ಬದುಕಲು ಅನುಕೂಲವಾಗುತ್ತದೆ. ಎಲ್ಲರೂ ಒಂದೇ ಜಾತಿ ಎಂದು ಬಾಯಲ್ಲಿ ಹೇಳಿದರೂ ರೂಪ, ನಡೆ, ನುಡಿಗಳು ಅವರನ್ನು ನಮ್ಮಿಂದ ಬೇರ್ಪಡಿಸುತ್ತವೆ. ಜಾತಿ

ತಳಹದಿ ಮೇಲೆ ಸುಲಭವಾಗಿ ಸಂಘಟಿಸಬಲ್ಲೆವು. ಆದ್ದರಿಂದ ನನ್ನ ಅಭಿಪ್ರಾಯದಂತೆ "ಜಾತಿ ಇರುವುದೇ ಸರಿ.'

**ನ್ಯಾ. ಯ. ಗೋಪಾಲ ಮತ್ತು ಆರ್. ನಾಗೇಂದ್ರರಾವ್ ಶಿವಮೊಗ್ಗ.**

## ೪. ಜಾತಿ ಪದ್ಧತಿ-ಮಹಾನ್‌ಶಾಪ

**ಹೆಚ್. ವಿ. ತಿಮ್ಮಪ್ಪ, ಶಿವಮೊಗ್ಗ.**

ಅತ್ಯಂತ ಹೀನವಾದ ಜಾತಿ ಪದ್ಧತಿಯು ಕುಷ್ಠರೋಗದಂತೆ ಸಮಾಜ-ರಾಷ್ಟ್ರಗಳನ್ನು ತಿನ್ನುತ್ತ ಬರುತ್ತಿದೆ. ಭಾರತೀಯ-ಮುಖ್ಯವಾಗಿ ಹಿಂದೂ ತರುಣರು ನಾಸ್ತಿಕತೆಯತ್ತ ವಾಲುತ್ತಿರುವುದು ಈ ಕ್ರೂರ, ಅಮಾನುಷ, ಅರ್ಥರಹಿತ ಜಾತಿ ವಿಭಜನೆ ಕಂಡೇ! ಬೇರಾವ ದೇಶದಲ್ಲಿಯೂ ಇಲ್ಲದೆ ನಮಗೇ ಕಾಡಿರುವ ಈ ಅಸಹ್ಯ ಆಚರಣೆಯು ಧರ್ಮ-ದೇವರುಗಳತ್ತ ಜಿಗುಪ್ಸೆ ಹುಟ್ಟುವಂತೆ ಮಾಡುತ್ತದೆ.

ಇರುವವು ಎರಡೇ ಜಾತಿ, ಹೆಣ್ಣು ಮತ್ತು ಗಂಡು. ಉಳಿದುವೆಲ್ಲ ಮಾನವ ಕಲ್ಪಿತ. ಯಾವ ಅಪರಾಧವನ್ನೂ ಮಾಡದ, ಯಾವ ಅನುಭವವೂ ಇಲ್ಲದ ಮುಗ್ಧ ಮಗುವಿನ ತಲೆಗೆ ಹುಟ್ಟುತ್ತಲೇ ಜಾತಿಯ ಚೀಟಿ ಅಂಟಿಸುವ ಅನಿಷ್ಟ ಪದ್ಧತಿ ಎಷ್ಟು ಬೇಗ ತೊಲಗುವುದೋ ಅಷ್ಟೂ ಹಿತವು.



(೪೦ನೇ ಪುಟದಿಂದ)

ಎಂತಕ್ಕೆ ಎಂತಕ್ಕೆ
ಹಡೆದ ಕಾಯ ಬೀಯವಾಗದ ಮುನ್ನ ಅಟ್ಟುಣ್ಣು ಓ!
ಬೆರಣೆಯುಳ್ಳಲ್ಲಿ ಹೊತ್ತು ಹೋಗದ ಮುನ್ನ ಅಟ್ಟುಣ್ಣು ಓ!
ಮರಳಿ ಭವಕ್ಕೆ ಬಹೆ, ಬಾರದಿಹೆ.
ಕರ್ತೃ ಕೂಡಲ ಸಂಗಂಗೆ ಶರಣೆನ್ನು ಓ!

ಪಡೆದಿರುವ ಈ ಶರೀರವು ಶಿಥಿಲಗೊಂಡು ನಾಶವಾಗುವ ಮುನ್ನವೇ 'ಅಡಿಗೆ' ಮಾಡಿಕೊಂಡು ಉಣ್ಣಬೇಕಂತೆ, ಪಾರಮಾರ್ಥದ ಅಡಿಗೆಯನ್ನು. "ಬೆರಣಿ ಇರುವಾಗಲೇ, ಹೊತ್ತು ಹೋಗುವ ಮೊದಲೇ ಅಡಿಗೆ ಮಾಡಿ ಉಣ್ಣಬೇಕಂತೆ." ಇದರರ್ಥ ಮೈಯಲ್ಲಿ ಕಸುವು, ಶಕ್ತಿ ಇರುವಾಗಲೇ ಬದುಕಿನ ಅಮೂಲ್ಯ ವೇಳೆಯಾದ ತಾರುಣ್ಯ ಕಳೆದು ಹೋಗುವ ಮೊದಲಿಗೇ ಕರ್ತನಾದ ಪರಮಾತ್ಮನಿಗೆ ಶರಣಾಗಿ, ಅಧ್ಯಾತ್ಮ ಪಾಕಮಾಡಿ ಜನ್ಮ ಜನ್ಮಾಂತರದ ಭವದ ಹಸಿವೆಯನ್ನು ಹಿಂಗಿಸಿಕೊಳ್ಳಬೇಕಂತೆ! ಇಂತಹ ಮಹಂತರ ವಾಣಿಯನ್ನಾಧರಿಸಿ ಉನ್ನತ ಗುರಿಯತ್ತ ನೀವು ಸಾಗುವಂತಾಗಲೆಂದು ಹಾರೈಸುವೆ.

(ಕಥೆಯ ಅರ್ಧಭಾಗ ಹ್ಯಾಥರ್ನನ ಕಥೆಯಿಂದ ಸ್ಫೂರ್ತಿಗೊಂಡಿದ್ದು)

ನಿಮ್ಮೊಲವಿನ
**ತ್ರಿನೇತ್ರಿ.**



# ವಿಶ್ವಾತ್ಮನ ಲೀಲಾರೂಪ

**—ಮಾಶಿ ಮಹಾದೇವಿ.**

ಸುಳಿಯುತಿಹ ಹೊಳೆಯುತಿಹ ಕಾಣುವೆಡೆಯಲ್ಲೆಲ್ಲ
ಕಾಣಲೊಲ್ಲದೆ ಬಾಲೆ ಅವನ ಸಿರಿ ಲೀಲೆ ॥

ಅರಳುತಿಹ ಸುಮದೊಳು ಬಿರಿದು ನಗುತಿಹನು
ಮೊರೆಯುತಿಹ ಜಲದೊಳು ಓಂಕಾರ ಸ್ಪಂದಿಸುತ ।
ಕೋಕಿಲೆಯ ಕುಕಿಲದಲಿ ಹರಿಯುತಿಹ ಚೇತನನು
ಮೂಕ ತಾವರೆಯಲ್ಲಿ ಅರಳುತಿಹ ಮೋಹನನು ॥ ೧ ॥

ಬೀಸುತಿಹ ಗಾಳಿಯಲಿ ನಿರಾಳ ಹೆಜ್ಜೆಯನಿಕ್ಕಿ
ಬಯಸುತಿಹ ಹೃದಯಕ್ಕೆ ಪ್ರೇಮ ಬೆಸುಗೆಯನಿಕ್ಕಿ ।
ಮೂಡುತಿಹ ರವಿಯಲ್ಲಿ ನಗುನಗುತ ಬರುವ
ತಾಡಿಸುವ ಮುಗಿಲನ್ನು ಏರಿ ತಾ ಬರುವ ॥ ೨ ॥

ಹೃದಯ ವೀಣೆಯ ಮಿಡಿವ ಚತುರ ವೈಣಿಕನು
ಸುಧೆಯ ಸಾರವ ಹೊತ್ತ ಮಕರಂದ ಪ್ರಿಯನು ।
ಗುಂಯ್ಗುಡುವ ಭ್ರಮರ ದನಿಯಲಿ ಕೇಳದೋ ಓಂಕಾರ
ಸುಂಯ್ಗುಡುವ ಗಾಳಿಯ ನಡಿಗೆಯಲಿ ಶ್ರೀಕಾರ ಶುಭಕಾರ ॥ ೩ ॥

ಹೃದಯ ಬಟ್ಟೆಯ ಮೇಲೆ ನೋಡವನ ಹೆಜ್ಜೆ
ಕಣ್ದೆರೆ ಕಾಣದೊ ಬೇರಾಗದಪ್ಪುಗೆ ।
ಸುಂದರನಿವ ಎನ್ನವನು ನಾನಿವನ ಭಾರ್ಯೆ
ಅಂದದ ಸಚ್ಚಿದಾನಂದನಿಗೊಲಿದ ನಾನೇ ಕಡುಧನ್ಯೆ ॥ ೪ ॥

# ಮಾತೆ ಮಹಾದೇವಿಯವರ ಒಂದು ಭಾವಗೀತೆ

**ಅಲ್ಲಮ ಪ್ರಭು**

ತನ್ನ ಸ್ವಂತ ಅನುಭವವನ್ನು ನೇರವಾಗಿ ಹೇಳುವುದು ; ಹೆಚ್ಚು ತನಗೆ ತಾನೆ ಹೇಳಿಕೊಳ್ಳುವುದು ಭಾವಗೀತೆಯ ಒಂದು ಲಕ್ಷಣವಾಗಿ ಕಂಡುಬರುತ್ತದೆ. ಹೀಗೆ ಕವಿ ಹೇಳಿಕೊಂಡದ್ದು, ಕ್ಷಣವೊಂದರ ಸ್ಮಾರಕವಾಗಿ ಭಾಷೆಯಲ್ಲಿ ಮೈದಾಳಿರುತ್ತದೆ. ಒಂದು ಸನ್ನಿವೇಶವನ್ನು ಕುರಿತು ಆಲೋಚನೆ ನಡೆಸಿದಾಗ ಅವನಲ್ಲಿ ಒಂದು ಭಾವ ದೀಪ್ತವಾಗುತ್ತದೆ. ಆ ಭಾವ, ಭಾವತೀವ್ರತೆಯಿಂದ ಕೂಡಿದ್ದು ದೀಪ್ತವಾದದ್ದಷ್ಟನ್ನೇ ಹೇಳಿದಾಗ ಅನುಭವವನ್ನು ಜಾಳು ಜಾಳು ಮಾಡದೆ ಸಂಕ್ಷಿಪ್ತವಾಗಿ ಹೇಳಿದಾಗ ಆ ಸಂಕ್ಷಿಪ್ತತೆಯೇ ಆ ಭಾವಗೀತೆಗೆ ಸತ್ವವನ್ನು ತಂದು ಕೊಡುತ್ತದೆ.

ಈ ದೃಷ್ಟಿಯಿಂದ ಈ ಭಾವಗೀತೆಯನ್ನು ನೋಡಿದಾಗ ಇದರ ಮಹತ್ವವೇನು ? ಎಂಬುದನ್ನು ವಿವರಗಳಲ್ಲಿ ತಿಳಿಯುವ.

ಸುಳಿಯುತಿಹ ಹೊಳೆಯುತಿಹ ಕಾಣುವೆಡೆಯಲ್ಲೆಲ್ಲ
ಕಾಣಲೊಲ್ಲದೆ ಬಾಲೆ ಅವನ ಸಿರಿಲೀಲೆ

ಈ ಭಾವಗೀತೆ ಮಹಾಚೈತನ್ಯಾತ್ಮಕನಾದ ದೇವನ ಇರವನ್ನು ಅವನ ಸುಳಿವು ಹೊಳಹುಗಳನ್ನು ಈ ಮೊದಲೆರಡು ಚರಣಗಳು ಹೇಳುತ್ತವೆ. ನೋಡುವಲ್ಲೆಲ್ಲೆಡೆಯೂ ಸುಳಿಯುತ್ತಿದ್ದಾನೆ, ಹೊಳೆಯುತ್ತಿದ್ದಾನೆ. ಆದರೆ ಅವನ ಸಿರಿಲೀಲೆ ಕಾಣಲೊಲ್ಲದ ಬಾಲೆ ತನಗೆ ತಾನೇ ನುಡಿದುಕೊಳ್ಳುತ್ತಾಳೆ. ಕಾರಣ ಅವನು ಸುಳಿಯುತ್ತಾ ಇದ್ದಾನೆ ಗಾಳಿಯ ಹಾಗೆ. ಗಾಳಿ ಸುಳಿಯುತ್ತದೆ ತೋರುವುದಿಲ್ಲ. ಸ್ಪರ್ಶಕ್ಕೆ ಮಾತ್ರ ಅದರ ಇರವು ಗೋಚರವಾಗುತ್ತದೆ. ಮಿಂಚು ಹೊಳೆಯುತ್ತದೆ, ಆದರೆ ಅದು ಇಡಿಯಾಗಿ ಪೂರ್ಣವಾಗಿ ನಮ್ಮ ಗ್ರಹಿಕೆಗೆ ನಿಲುಕುವುದಿಲ್ಲ. ಅವನು ಎಲ್ಲೆಡೆ ಕಾಣ ಬರುತ್ತಿದ್ದಾನೆ. ಅವನ ಸುಳಿವು ಹೊಳಹುಗಳನ್ನು ಕಂಡುಕೊಂಡ ಬಾಲೆ ಎಲ್ಲೆಲ್ಲಿ ಕಂಡುಕೊಂಡೆನೆಂಬುದನ್ನು ಸ್ಪಷ್ಟಪಡಿಸುತ್ತಾಳೆ. ಇಲ್ಲಿ ಬರುವ 'ಅವನು' ಪ್ರಥಮ ಪುರುಷವಾಚಕ ಹುಟ್ಟುವ ಮತ್ತು ಸಾಯುವ ಒಬ್ಬ ವ್ಯಕ್ತಿಯನ್ನು ಕುರಿತದ್ದಲ್ಲ. ಕಾರಣ ಅವನ ನಂತರವೇ ಸಿರಿಲೀಲೆ ಎಂಬುದು ಬಳಕೆಯಾಗಿದೆ. ಸಿರಿಲೀಲೆ ಎಂಬುದು ಅಲ್ಪನಾದ ವ್ಯಕ್ತಿಯನ್ನು ದೂರಮಾಡಿ ಮಹಾಚೈತನ್ಯನಾಗಿ ಮಹತ್ತಾಗಿ ಲೀಲಾ ವಿನೋದವನ್ನು



ತೋರಿಸುವ ಸತ್, ಚಿತ್, ಆನಂದ ಮಯನಾದವನನ್ನು ಹೇಳುತ್ತವೆ. ಆ ಸಚ್ಚಿದಾನಂದನ ಇರವು ಅನುಭವಕ್ಕೆ ಗೋಚರವಾಗುವುದು ಹೀಗೆ :

ಅರಳುತಿಹ ಸುಮದೊಳು ಬಿರಿದು ನಗುತಿಹನು
ಮೊರೆಯುತಿಹ ಜಲದೊಳು ಓಂಕಾರ ಸ್ಪಂದಿಸುತ ।
ಕೋಕಿಲೆಯ ಕುಕಿಲದಲಿ ಹರಿಯುತಿಹ ಚೇತನನು
ಮೂಕ ತಾವರೆಯಲ್ಲಿ ಅರಳುತಿಹ ಮೋಹನನು ।

ನಿಸರ್ಗದಲ್ಲಿ ಪ್ರಕೃತಿಯ ಮಡಿಲಲ್ಲಿ ಬೆಳೆದು ನಿಂತ ಸಸಿಯ ಸಣ್ಣ ರೆಂಬೆಯಲ್ಲಿ ಹೂವೊಂದು ಅರಳುತಿದೆ ಆ ಮಹಾಚೈತನ್ಯದ ಇರವು ಈ ರೀತಿ ಗೋಚರವಾಗುತ್ತದೆ. ಅದರ ಇರವು ಈ ರೀತಿ ಸ್ಪಷ್ಟವಾಗುತ್ತಿದೆ. ಅವನ ಸಿರಿಲೀಲೆ ಪ್ರಕಟವಾಗಲು ನಾನಾ ರೀತಿಯ ಮಾಧ್ಯಮಗಳು. ಸುಮವೊಂದು ಅರಳುತ್ತಿರುವಾಗ ಆ ಸುಮದ ಮಧ್ಯದಲ್ಲಿ ಆ ದೇವ ಬಿರಿದು ನಗುತ್ತಾ ನಗೆ ಚೆಲ್ಲುತ್ತಿದ್ದಾನೆ. ಕವಿಯ ಕಾಣ್ಕೆ ಅವನ ಇರವನ್ನು ಈ ರೀತಿ ಹೇಳುತ್ತದೆ. ಅಲ್ಲಿಯೇ ಮತ್ತೊಂದೆಡೆಯಲ್ಲಿ ಮೊರೆದು ತೊರೆಯೊಂದು ಹರಿಯುತ್ತದೆ. ಅನುಭಾವದ ತುದಿಯಲ್ಲಿ ನಿಂತ ಕವಿಗೆ ಅಲ್ಲಿ ಓಂಕಾರ ಪ್ರಣವ ನಿರಂತರವಾಗಿ ಕೇಳಿಬರುತ್ತದೆ. ತನ್ನ ಸಿರಿಲೀಲೆಯನ್ನು ರಮ್ಯ ಮನೋಹರವಾದ ನಿಸರ್ಗದ ತೊರೆಯ ಸುಳಿಯುವಿಕೆಯಲ್ಲಿ ಅದರ ಹರಿಯುವಿಕೆಯ ಹೊಳಹಿನಲ್ಲಿ ಓಂಕಾರವನ್ನುಂಟುಮಾಡುವುದರ ಮೂಲಕ ವ್ಯಕ್ತಮಾಡುತ್ತಿದ್ದಾನೆ. ಆ ಪ್ರಕೃತಿಯ ಮಡಿಲಲ್ಲಿ ಕೋಗಿಲೆ ಕುಹೂ ಎಂದು ತನ್ನ ಇಂಚರವನ್ನು ಧ್ವನಿಸುತ್ತದೆ. ಕೋಕಿಲೆಯ ಕುಕಿಲದಲಿ ಹರಿಯುತಿಹ ಚೇತನನು, ಅವನ ಚೇತನ ಎಲ್ಲೆಡೆಯೂ ಹರಿಯುತ್ತಿರುವುದರಿಂದಲೇ ಎಲ್ಲವೂ ಮಂಗಲಮಯವಾಗಿ ಗೋಚರವಾಗುವುದು. ಅವನ ಆ ಚೇತನದ ಇರುವಿಕೆಯು ಕೋಕಿಲೆಯ ಕುಕಿಲದಲಿ ವ್ಯಕ್ತವಾಗುತ್ತದೆ. ಅವನ ಚೈತನ್ಯವನ್ನು ತಾವರೆಯ ಅರಳುವಿಕೆಯಲ್ಲಿ ಕವಿಮನ ಕಂಡುಕೊಳ್ಳುತ್ತದೆ. ಸೂರ್ಯನ ಬರುವಿಕೆಯಿಂದ ತಾವರೆ ಅರಳುತ್ತದೆ. ಎಳೆಬಿಸಿಲು ಬಂದು ಎಲ್ಲೆಡೆ ಪಸರಿಸಿದಂತೆ ತಾವರೆಯ ದಳದ ಮೇಲೂ ಬೀಳುತ್ತದೆ. ಕಾಂತಿಯುಕ್ತವಾದ ವರ್ಣದಿಂದ ಕೂಡಿರುವ ದಳಗಳು ಸೂರ್ಯನ ಬಿಸಿಲಿನಿಂದ ಮತ್ತಷ್ಟು ಕಂಗೊಳಿಸುತ್ತವೆ. ಅರಳಿದ ತಾವರೆಯ ದಳಗಳು ಅರಳಿ ನಿಂತು ಅರಳುವ ಕ್ರಿಯೆಯಲ್ಲಿ ಮನೋಹರನ ಇರುವಿಕೆಯನ್ನು ತಿಳುಹುತ್ತವೆ.

ಬೀಸುತಿಹ ಗಾಳಿಯಲಿ ನಿರಾಳ ಹೆಜ್ಜೆಯನಿಕ್ಕಿ
ಬಯಸುತಿಹ ಹೃದಯಕ್ಕೆ ಪ್ರೇಮ ಬೆಸುಗೆಯನಿಕ್ಕಿ

ತಣ್ಣನೆಯ ಗಾಳಿ ಮೃದುಲತೆಗಳನ್ನು ಸ್ಪರ್ಶಿಸುತ್ತ ನದೀತರಂಗಗಳನಮುಕುತ್ತ ತನ್ನ ನಿರಾಳ ಹೆಜ್ಜೆಯನ್ನಿಡುತ್ತದೆ. ಆಳವಿಲ್ಲದ ಅದರ ಹೆಜ್ಜೆ ಸ್ಪರ್ಶ, ವನಲತೆಗಳ ಅಲ್ಲಾಡುವಿಕೆಯಲ್ಲಿ ಅನುಭವವಾಗುತ್ತಿದೆ. ಆಗ ಅವನ ಇರವನ್ನು ಕಂಡುಕೊಂಡ ಅಲ್ಪಚೇತನ

ಅವನನ್ನೆ ಬಯಸುತ್ತದೆ. ಅವನ ಆ ಮೌನವೇ ಭೌತವಸ್ತುಗಳ ಮಾಧ್ಯಮವಾದ ಚಲನೆಯೋ ಬಾಲೆಗೆ ಪ್ರೇಮಬೆಸುಗೆಯನ್ನಿಕ್ಕುತ್ತದೆ.

ಮೂಡುತಿಹ ರವಿಯಲ್ಲಿ ನಗು ನಗುತ ಬರುವ
ತಾಡಿಸುವ ಮುಗಿಲನ್ನ ಏರಿ ತಾ ಬರುವ

ನಿಸರ್ಗದ ಪ್ರತಿಯೊಂದು ಮಹದ್‌ವಸ್ತುಗಳ ಚಲನೆಯಲ್ಲಿ ಅವನ ಇರವೇ ಬಾಲೆಗೆ ಗೋಚರವಾಗುತ್ತದೆ. ಪ್ರತಿನಿತ್ಯ ಸೂರ್ಯನ ಇರವು ೧೨ ಗಂಟೆಗಳಲ್ಲಿ ತೋರುತ್ತದೆ. ಪ್ರತಿನಿತ್ಯ ಸೂರ್ಯೋದಯವನ್ನ ವ್ಯಕ್ತಿಗಳು ಕಂಡೂ ಕಾಣದ ಹಾಗೆ ನೋಡುತ್ತಾರೆ. ಜನರಿಗೆ ಅದರ ಬಗೆಗೆ ಆಸಕ್ತಿಯೂ ಇಲ್ಲ, ಆಲಸ್ಯವೂ ಇಲ್ಲ. ಆದರೆ ಕವಿಯ ಮನ ಮೂಡುತಿಹ ರವಿಯನ್ನೇ ನಗು ನಗುತ ಬರುವ ಎಂದು ಹೇಳುತ್ತದೆ. ನಿಸರ್ಗ ದಂಚಿನಲ್ಲಿ ತನ್ನ ಹೊಂಗಿರಣಗಳನ್ನು ಪಸರಿಸುತ್ತ ಜಗವನ್ನೆಲ್ಲ ತನ್ನ ನಗೆಯಲ್ಲಿ ತುಂಬಿ ಸುತ್ತ ಮೇಲೇರಿ ಬರುತ್ತಾನೆ. ಮುಗಿಲ ಮೋಡಗಳನ್ನೇರಿಯೂ ಅವನು ಏರಿಬರುತ್ತಾನೆ ಮೋಡಗಳ (ಅಪಾರ ಮೋಡಗಳ ತುಣಕುಗಳ ಸಮೂಹವನ್ನು ಬಾನಿಗಂಟಿದ ತೊನ್ನು ಎಂದು ಕರೆಯುವ ಮನೋಭಾವಕ್ಕೂ ತಾಡಿಸುವ ಮುಗಿಲನ್ನು ಏರಿ ತಾ ಬರುವ ಎನ್ನು ವುದಕ್ಕೂ ಎಷ್ಟೊಂದು ಅಂತರವಿದೆ.) ಮೋಡಗಳು ಒಂದಕ್ಕೊಂದು ತಾಡನ ಮಾಡು ತ್ತವೆ. ಅದರ ಶಬ್ದವನ್ನೇರಿ ಅವನು ಐತರುತ್ತಾನಂತೆ. ಎಂತಹ ಉಜ್ವಲವಾದ ಮನೋಹರದ ಚಿತ್ರಗಳಿವು. ಸಹೃದಯನಿಗೆ ಮನೋಲ್ಲಾಸವನ್ನುಂಟುಮಾಡುವ ಮನಮೋಹಕ ಚಿತ್ರಗಳು ಮಾಲೆಗಟ್ಟಿ ಬರುತ್ತವೆ.

ಇದುವರೆಗಿನ ಕವಿಗಳು ಹುಣ್ಣಿಮೆಯ ಚಂದಿರನನ್ನು ನಗು ನಗುತ ಬರುವ ಎಂದು ಕರೆದಿದ್ದಾರೆ. ಮೂಡುವ ರವಿ ತನ್ನ ಬೆಳಕಿನಿಂದ ಜಗವನ್ನೆಲ್ಲಾ ತೋಯಿಸಿದ ಎಂದು ಹೇಳಿದ್ದಾರೆ. ಆದರೆ ಯಾರೂ ಸಹ ರವಿಯನ್ನ ನಗುನಗುತ ಬರುವ ಎಂದು ಕರೆದಿಲ್ಲ. ನಿಸರ್ಗದ ಈ ನಿರಂತರ ಚೈತನ್ಯಯುಕ್ತವಾದ ಚಲನೆಯನ್ನು ಕ್ರಿಯೆಯಾಗಿ ಕೆಲವರು ಭಾವಿಸಿದ್ದುಂಟು. 'ಮೂಡಲ ಮನೆಯ ಮುತ್ತಿನ ನೀರಿನ ಎರಕವ ಹೊಯ್ದು' ಎನ್ನುವಲ್ಲಿ ಅದರ ಕ್ರಿಯೆಯನ್ನಷ್ಟೇ ಗಮನವಿರಿಸಿ ಹೇಳುವ ರೀತಿಯಿದೆ. ಅದರ ಹಿನ್ನೆಲೆಯ ಕಾರಣಿಕ ವಸ್ತುವಿಗೆ ಯಾವ ಧೋರಣೆಯೂ ಕಂಡು ಬರದು. ಆದರೆ ಮೂಡುತಿಹ ರವಿಯಲ್ಲಿ, ಏರಿ ತಾ ಬರುವ ಎನ್ನುವಲ್ಲಿ ದೇವನ ಇರವು ರವಿಯ ಮೂಲಕ ವ್ಯಕ್ತವಾಗುತ್ತದೆ. ಅವನ ಆ ಮಹಾ ಚೈತನ್ಯದ ಸಿರಿಲೀಲೆ ರವಿಯ ಆಗಮನದಿಂದ ಅವನು ಬರುವ ರೀತಿಯಿಂದ ತಿಳಿಯುತ್ತದೆ. ಇಲ್ಲಿ ರವಿಯಲ್ಲಿ ಮಹಾ ಚೈತನ್ಯದ ಇರವನ್ನು ಕಂಡ ಭಾವವಿದೆ, ನಿಸರ್ಗದ ಈ ಚಲನವಲನಗಳೆಲ್ಲ ನಮ್ಮವರಿಗೆ ಮಹತ್ತಾಗಿ ಗೋಚರವಾಗುವುದೇ ಇಲ್ಲ. ಅವ್ಯಕ್ತವಾದ ಆ ಮಹಾ ಕರ್ತ ನಿಸರ್ಗದಲ್ಲಿ ಎಷ್ಟೊಂದು ರೀತಿಯ ಪವಾಡಗಳನ್ನು ತನ್ನ ಸಿರಿಲೀಲೆಯನ್ನ ಪ್ರದರ್ಶಿಸುತ್ತಿದ್ದರೂ ಅವುಗಳೆಲ್ಲ



ಬರಿ ಕ್ರಿಯೆಯಾಗಿ ಸಾಮಾನ್ಯವಾಗಷ್ಟೇ ಗೋಚರವಾಗುತ್ತವೆ. ಇದು ನಮ್ಮಲ್ಲಿನ ದೃಷ್ಟಿದೋಷವೋ ಭಾವದ ಕೊರತೆಯೋ ತಿಳಿಯದು.

ಹೃದಯ ವೀಣೆಯ ಮಿಡಿವ ಚತುರ ವೈಣಿಕನವನು
ಸುಧೆಯ ಸಾರವ ಹೊತ್ತ ಮಕರಂದ ಪ್ರಿಯನು

ಹೃದಯ ವೀಣೆಯನ್ನು ನುಡಿಸಿ ಚತುರನಾದ ಅವನು ಗಾನವನ್ನು ಆಲಿಸುತ್ತಿದ್ದಾನೆ. ಇಷ್ಟೇ ಅಲ್ಲದೆ ಅವನ ಸಿರಿಲೀಲೆ ಸುಧೆಯ ಸಾರವನ್ನು ಹೊತ್ತಿರುವ ಮಕರಂದ ಪ್ರಿಯ ನಲ್ಲಿಯೂ ಕಂಡುಬರುತ್ತದೆ. ಗುಂಯ್ಗುಡುವ ಭ್ರಮರ ದನಿಯಲ್ಲಿ ಕೇಳದೋ ಓಂಕಾರ ಸುಂಯ್ಗುಡುವ ಗಾಳಿಯ ನಡಿಗೆಯು ಶ್ರೀಕಾರ ಶುಭಕಾರ. ಭ್ರಮರ, ಸುಧೆಯ ಸಾರವ ಹೊತ್ತು ದನಿಯೆತ್ತಿ ಚಲಿಸುತ್ತಿದೆ. ಅದರ ಆ ದನಿ ಓಂಕಾರವನ್ನೇ ನಾದಗೈಯ್ಯುತ್ತಿದೆ. ಗಾಳಿಯು ನಡಿಗೆಯಲ್ಲಿಯೂ ಮಂಗಳದ ಶ್ರೀಕಾರ ಕಂಡುಬರುತ್ತಿದೆ.

ಹೃದಯ ಬಟ್ಟೆಯ ಮೇಲೆ ನೋಡುವನ ಹೆಜ್ಜೆ
ಕಣ್ದೆರೆ ಕಾಣದೊ ಬೇರಾಗದಪ್ಪುಗೆ

ಎಲ್ಲೆಡೆ ಅವನ ಸಿರಿಲೀಲೆಯನ್ನು ಕಂಡುಕೊಂಡ ಬಾಲೆಯ ಹೃದಯ ಬಟ್ಟೆಯ ಮೇಲೆ ಅವನ ಹೆಜ್ಜೆ ಗುರುತುಗಳು ತೋರುತ್ತಿವೆಯಂತೆ. ಇಷ್ಟೇ ಅಲ್ಲದೆ ಅವನ ಅಪ್ಪುಗೆ ಬಿಚ್ಚಿ ಬೇರಾಗದೆ ಬೆರಸಿ ಒಂದಾಗಿ 'ಕಣ್ದೆರೆ ಕಾಣದೊ ಬೇರಾಗದಪ್ಪುಗೆ' ಇರುವುದು ಬಾಲೆಗೆ ಅರಿವಾಗುತ್ತದೆ.

ಸುಂದರನಿವ ಎನ್ನವನು ನಾನಿವನ ಭಾರ್ಯೆ
ಅಂದದ ಸಚ್ಚಿದಾನಂದನಿಗೊಲಿದ ನಾನೇ ಕಡುಧನ್ಯೆ.

ಎಂದು ಮುಕ್ತಮನದಿಂದ ಬಾಲೆ ಹೇಳಿಕೊಳ್ಳುತ್ತಾಳೆ. ಅಂದದ ಸಚ್ಚಿದಾನಂದಗೊಲಿದ ನಾನು ಕಡುಧನ್ಯೆ ಎಂದು ತನ್ನ ಬಗೆಗೆ ಧನ್ಯಭಾವ. ಭೌತವಸ್ತುಗಳಲ್ಲೆಲ್ಲ ದೇವನ ಇರವನ್ನು ಕಂಡುಕೊಂಡ ಭಾವ ವ್ಯಕ್ತವಾಗಿದೆ. ಇಲ್ಲಿ ಮಹಾದೇವಿಯಕ್ಕನ ವಚನ ವೊಂದು ನೆನಪಿಗೆ ಬರುತ್ತದೆ.

ಈಳೆ ನಿಂಬೆ ಮಾವು ಮಾದಲಕ್ಕೆ ಹುಳಿನೀರನೆರೆದವರಾರಯ್ಯ ?
ಕಬ್ಬು ಬಾಳೆ ಹಲಸು ನಾರಿಕೇಳಕ್ಕೆ ಸಿಹಿನೀರನೆರೆದವರಾರಯ್ಯ ?
ಮರುಗ ಮಲ್ಲಿಗೆ ಪಚ್ಚೆಗೆ ಪರಿಮಳದುದಕವನೆರೆದರಾರಯ್ಯ ?
ಕಳವೆ ಶಾಲ್ಯನ್ನಕ್ಕೆ ಓಗರದ ಉದಕವನೆರೆದವರಾರಯ್ಯ ?
ಇಂತೀ ನೆಲವು ಒಂದೆ ಜಲವು ಒಂದೆ ಆಕಾಶವು ಒಂದೆ ?
ಒಂದೆ ಜಲವು ಹಲವು ದ್ರವ್ಯಂಗಳ ಕೂಡಿಕೊಂಡಿರ್ದರೇನು ?
ತನ್ನ ಪರಿ ಬೇರಾಗಿಹ ಹಾಗೆ ಎನ್ನದೇವ ಚನ್ನಮಲ್ಲಿಕಾರ್ಜುನಯ್ಯನು
ಹಲವು ಜಗಂಗಳ ಕೂಡಿಕೊಂಡಿರ್ದರೇನು ? ತನ್ನಪರಿ ಬೇರೆ.

# ಗ್ರಂಥ ವಿಮರ್ಶೆ

ವಿಜಯಪುರ

ತಾ|| ೧೫-೧೨-೭೭

ಪೂಜ್ಯ ಜಗದ್ಗುರು ಮಾತೆ ಮಹಾದೇವಿಯವರಿಗೆ,

ವಿಜಯಪುರದ ಅಕ್ಕನ ಬಳಗದ ಸೋದರಿಯೋರ್ವಳು ಗೈವ ಶಿರಸಾಷ್ಟಾಂಗ ಪ್ರಣಾಮಗಳು.

ಮಾತಾಜಿ, ನಾನು ನಿಮಗೆ ಅಪರಿಚಿತಳಾದರೂ ನೀವು ಮಾತ್ರ ನಿಮ್ಮ 'ತರಂಗಿಣಿ'ಯ ನಾದ ತರಂಗಗಳ ಮೂಲಕ ನಮ್ಮೆಲ್ಲರ ಹೃದಯಗಳನ್ನು ಮೀಟಿ ಅದರಿಂದ ಸಿಗುವ ಅಲೌಕಿಕವಾದ ಆನಂದಾನುಭವವೆಂಬ ಸಮುದ್ರದಲ್ಲಿ ಮೀಯಿಸುವದರ ಮೂಲಕ ನಮಗೆಲ್ಲ ಸಾಕಷ್ಟು ಸುಪರಿಚಿತರಾಗಿದ್ದೀರಿ.

ತಾಯೆ, ಈ ಪತ್ರಬರೆಯುವ ಉದ್ದೇಶವೇನೆಂದರೆ ನಿಮ್ಮ ಅಮೋಘ ಕೃತಿಯಾದ 'ತರಂಗಿಣಿ'ಯನ್ನು ಪ್ರತಿದಿನ ಸಂಜೆ ನಡೆಯುವ ನಮ್ಮ ಅಕ್ಕನ ಬಳಗದಲ್ಲಿ ಪ್ರವಚನಕ್ಕಿಟ್ಟುಕೊಂಡು ಸುಮಾರು ಎರಡು ತಿಂಗಳಿನಲ್ಲಿ ಮತ್ತು ವಾರಕ್ಕೊಮ್ಮೆ ನಡೆಯುವ ''ವೀರಭದ್ರಸ್ವಾಮಿ ವಿಚಾರಗೋಷ್ಠಿ''ಯಲ್ಲಿ ಸುಮಾರು ಒಂದುವರೆ ವರುಷದಲ್ಲಿ ಓದಿ ಮುಗಿಸಿದಾಗ ಅದರಿಂದುದಿಸಿದ ಸಂತೋಷವನ್ನು ತಮ್ಮಲ್ಲಿ ಹಂಚಿಕೊಳ್ಳಬೇಕು ಎಂಬ ನನ್ನ ಹಂಬಲವನ್ನು ಹತ್ತಿಕ್ಕಿಕೊಳ್ಳಲಾರದೇ ಈ ಪತ್ರ ಬರೆಯುತ್ತಿದ್ದೇನೆ. ಸುಮಾರು ೯೦೦ ಪುಟಗಳ ಈ ಕಾದಂಬರಿಯನ್ನು ಓದಿ ಮುಗಿಸಿದಾಗ ಆದ ಆನಂದ ನನ್ನ ಹೃದಯಕ್ಕೆ ಗೊತ್ತೇ ಹೊರತು ಇಲ್ಲಿ ವರ್ಣಿಸಲು ನನಗಂತು ಮಾತುಗಳೇ ಬರುವುದಿಲ್ಲ.

ಓ ಮಾತೆ, ನಮ್ಮ ಕನ್ನಡನಾಡಿನ ಉಡುತಡಿಯಲ್ಲಿ ಅರಳಿದ ಈ ಹೂವು ಕೊನೆಗೆ ಶ್ರೀ ಶೈಲದ ಕದಳಿಯ ಬನದಲ್ಲಿ ಮೃಡನ ಮುಡಿಯೇರಿ ರಾರಾಜಿಸುವದನ್ನು ನೆನೆಸಿಕೊಂಡಾಗ ಮೈ ರೋಮಾಂಚಕವಾಗುವದೇ ಅಲ್ಲದೆ ಅದನ್ನು ಹೃದಯಂಗಮವಾಗಿ ಚಿತ್ರಿಸಿ, ಎಷ್ಟೇ ತಿಳಿಯದ ಮೂಢರಾದರೂ ಅರ್ಥಮಾಡಿಕೊಳ್ಳುವಷ್ಟು ಸರಳವಾಗಿ ಸುಂದರವಾಗಿ ಮೂಡಿಸಿರುವ ನಿಮ್ಮ ಕಲಾಕುಶಲತೆಗೆ ತಾವೇತಾವಾಗಿ ತಲೆ ಬಾಗುತ್ತವೆ,

ಅಮ್ಮಾ, ಸಾಮಾನ್ಯವಾಗಿ ಅಕ್ಕನ ಜೀವನಚರಿತ್ರೆಯ ವಿಷಯ ಎಲ್ಲರಿಗೂ ಗೊತ್ತಿರುವುದೇ ಆದರೂ ನಿಮ್ಮ ಕರಗಳಿಂದ ಮೂಡಿ ಬಂದಿರುವ 'ತರಂಗಿಣಿ'ಯಾವ ವೈಶಿಷ್ಟ್ಯವನ್ನು ಪಡೆದಿದ್ದಾಳೋ ಏನೋ, ಎಲ್ಲರ ಹೃದಯಗಳನ್ನು ಬಗೆದು ನೋಡುವಂಥವಳಾಗಿದ್ದಾಳೆ. ನಾನಂತೂ ಪುಟ ಪುಟದಲ್ಲೂ ಭವದ ಬೇರನ್ನೇ ಕಿತ್ತೆಸೆಯುವಂಥ, ನಮ್ಮ ಜೀವನದಲ್ಲಿ ಸುಲಭವಾಗಿ ಅಳವಡಿಸಿಕೊಳ್ಳಲು ಸಾಧ್ಯವಾಗುವಂತೆ ಉದಾಹರಣೆಯ ಮಾತುಗಳನ್ನು ಓದುತ್ತಿದ್ದಾಗ ಅಕಸ್ಮಾತ್ ಒಂದಕ್ಷರವೇನಾದರೂ ಎಲ್ಲಾದರೂ ತಪ್ಪಿಬಿಟ್ಟೀತೊ ಎನ್ನುವ ಭಯದಿಂದ, ಬಿಟ್ಟ ಕಣ್ಣಿನಿಂದ ಓದಿದನ್ನೇ ಮತ್ತೆಮತ್ತೆ ಓದುತ್ತಿದ್ದೆ ಆಗ ನಾನೊಂದು ಪವಾಡವನ್ನು ಕಾಣುತ್ತಿದ್ದೆ. ನಿಮ್ಮ ತರಂಗಿಣಿ ನನ್ನೆದುರು ನಿಲ್ಲು



ತ್ತಿದ್ದಳು, ಓಡಾಡುತ್ತಿದ್ದಳು; ತನ್ನ ಬದುಕಿನ ಎಲ್ಲಾ ಅವಸ್ಥೆಗಳಲ್ಲಿಯೂ ನನ್ನನ್ನು ಕೂಡ ಜೊತೆಗೊಯ್ಯುತ್ತಿದ್ದಳು. ಇದೇನು ಕನಸೋ ನನಸೋ ಎಂದು ನಾನು ಮತ್ತೆ ಮತ್ತೆ ಕಣ್ಣಗಲಿಸಿ ನೋಡಿದಾಗ ನನ್ನ ದೃಷ್ಟಿಗೆ ನೇರವಾಗಿ ಕಾಣುತ್ತಿದ್ದುದು ಅಕ್ಕನೇ, ಆದರೆ ೮೦೦ ವರ್ಷಗಳ ಹಿಂದಿನ ಉಡುತಡಿಯ ಓಂಕಾರ-ಲಿಂಗಮ್ಮರ ಮಗಳು ಮಹಾದೇವಿ ಅಕ್ಕನಲ್ಲ, ಇಂದಿನ ಸ್ತ್ರೀ ಕುಲವನ್ನೇ ಉದ್ಧರಿಸಲು ಆ ಅಕ್ಕನೇ ಮತ್ತೊಮ್ಮೆ ಇಳೆಗೆ ಇಳಿದು ಬಂದಿರುವಳೋ ಎಂಬಂತೆ ಇಡೀ ಕರ್ನಾಟಕದಲ್ಲೇ ಮೊದಲನೇ ಸ್ತ್ರೀ ಜಗದ್ಗುರುವಾಗಿ, ಧರ್ಮೋದ್ಧಾರದ ಕ್ರಾಂತಿಕಾರಿಣಿಯಾಗಿ, ಬಸವ ಮಂಟಪದ ಆದಿ ದೇವತೆಯಾಗಿ ತರಂಗಿಣಿಯ ಒಡತಿಯಾಗಿ ಪ್ರಕಾಶಿಸುತ್ತಿರುವ "ಮಾತೆ ಮಹಾದೇವಿ" ಆ ಅಕ್ಕನಂತೆ ಸಣ್ಣ ವಯಸ್ಸಿಗೆ ವೈರಾಗ್ಯವನ್ನು ತಾಳಿ, ವೀರ ವಿರಾಗಿಣಿಯಾದ ಈ ಮಹಾದೇವಿ ಅಕ್ಕನನ್ನಾದರೂ ಕಾಣುವ, ಒಡನಾಡುವ ನಮ್ಮ ಸುದೈವಕ್ಕಾಗಿ ನಾವೆಲ್ಲ ಹೆಮ್ಮೆ ಪಟ್ಟುಕೊಳ್ಳಬೇಕು.

ಮಾತಾಜಿ, ಸಾಹಿತ್ಯ ಕೇವಲ ಸಂತೋಷಕ್ಕೆ ಅಲ್ಲ; ಪ್ರೇರಣೆಗೆ ಗುರಿ. ಮನಸ್ಸನ್ನು ಕುಣಿಸುವದಕ್ಕೆ ಅಲ್ಲ, ಹೃದಯವನ್ನು ತೊಳೆದು ಶುದ್ಧಮಾಡುವುದಕ್ಕೆ; ಎನ್ನುವ ಹಾಗೆ 'ತರಂಗಣಿ'ಯ ಮೂಲಕ ಎಲ್ಲರ ಹೃದಯದ ಕೊಳೆಗಳನ್ನು ಕಳೆಯಲು ಪ್ರಯತ್ನ ಪಡುತ್ತಿರುವ ನಿಮ್ಮಿಂದ ಜನತೆಯ ಮೌಢ್ಯವನ್ನು, ವಿಚಾರ ಪರರನ್ನಾಗಿಸುವ ಇಂತಹ ಸಾಹಿತ್ಯ ಇನ್ನೂ ಹೆಚ್ಚು ಹೆಚ್ಚಾಗಿ ಹೊಮ್ಮಿ ಬರಲಿ.

ಓ ತಾಯೆ, ಏನೂ ಅರಿಯದವಳಾದ ನಾನು ನನ್ನ ಮನಸ್ಸಿಗೆ ತೋರಿದ ಮುಗ್ಧ ಭಾವನೆಗಳನ್ನಿಲ್ಲಿ ತೋಡಿಕೊಂಡಿದ್ದೇನೆ. ಇದರಲ್ಲಿ ತಪ್ಪೇನು ಒಪ್ಪೇನೆಂದರಿಯೆ; ಎಲ್ಲಾ ಅರಿದವರಾದ ತಾವು ನಮ್ಮ ತಪ್ಪುಗಳನ್ನು ತಿದ್ದಿಕೊಳ್ಳುವಿರೆಂದು ಪ್ರಾರ್ಥಿಸಿ ನನ್ನ ತೊದಲ್ನುಡಿಯ ಸಂದೇಶದೊಂದಿಗೆ ನನ್ನ ಪತ್ರ ಮುಗಿಸುತ್ತೇನೆ.

**ಓ ಮಾತೆ**

ಹಾಲಾಗು ಹಣ್ಣಾಗು ಮಂಗಳದ ಮನೆಯಾಗು
ತಿಂಗಳಿನ ಬೆಳಕಾಗು ಮನುಜಕುಲಕೆ
ಸಿಂಗಾರದೈಸಿರಿಯ ತಂದು ಜನಕ್ಕೆ
ನಿತ್ಯ ಸಂತೋಷಕ್ಕೆ ನಿತ್ಯ ಶುಭ ಸಂಪದಕೆ;
ನಿತ್ಯ ಕಲ್ಯಾಣಕ್ಕೆ ನಾಂದಿಯಾಗು.
ಓ ಎನ್ನ ಮನವೆ,
ಮಾತೆ ಮಹಾದೇವಿ ಅಕ್ಕನ ಪಾದಾರವಿಂದಗಳಿಗೆ
ಅನರವತವೂ ನಮಿಸಿ ಸಾಗು.

ಇತಿ, ಅಕ್ಕನ ಬಳಗದ ಸೋದರಿ,

ಬಿ. ಕಾಮಾಕ್ಷಮ್ಮ.

**ಮಾನವತಾವಾದಿಗಳೂ, ಕ್ರಾಂತಿಯೋಗಿಗಳೂ, ಪ್ರವಚನಕಾರರೂ,**
**ಸಮತಾವಾದಿಗಳೂ ಆದ**
**ಪೂಜ್ಯ ಶ್ರೀ ಸದ್ಗುರು ಲಿಂಗಾನಂದ ಮಹಾಸ್ವಾಮಿಗಳು, ಬಿ.ಎ.(ಆನರ್ಸ್)**
**ಅವರಿಗೆ ಅರಸೀಕೆರೆಯ ಪುರಸಭೆಯು, ನಾಗರಿಕರೆಲ್ಲರ ಪರವಾಗಿ ಅರ್ಪಿಸಿದ**

# ಬಿನ್ನವತ್ತಳೆ

**ಶ್ರೇಷ್ಠ ಪ್ರವಚನಕಾರರೇ:–** ಶ್ರೀ ಬಸವೇಶ್ವರರ ಜನ್ಮಭೂಮಿಯಾದ ಬಿಜಾಪುರ ಜಿಲ್ಲೆಯ ಮನುಗೂಳಿಯ ಮಾಣಿಕ್ಯವಾಗಿ ಜನಿಸಿ, ಕನ್ನಡದ ಗಂಡುಮೆಟ್ಟಿನ ನೆಲವಾದ ಬೆಳಗಾವಿಯಲ್ಲಿ ತತ್ವಜ್ಞಾನ, ಆನರ್ಸ್ ಪದವೀಧರರಾಗಿ, ಜ್ಞಾನದೀಪ್ತಿಯಾಗಿ, ಕ್ರಾಂತಿ ಕಿಡಿಯಾಗಿ, ಅವಿಶ್ರಾಂತ ಸ್ಫೂರ್ತಿಯಾಗಿ, ನಾಡಿನಾದ್ಯಂತ ಸಂಚರಿಸುತ್ತಾ ತಾವಿಲ್ಲಿಗೆ ಆಗಮಿಸಿದ್ದೀರಿ.

ಧರ್ಮದೆಡೆಗೆ ಜನ ಬರದಾಗ, ಧರ್ಮದೀಪ್ತಿಯನ್ನೇ ಅವರೆಡೆಗೆ ಒಯ್ಯಬೇಕು ಎಂಬ ತಮ್ಮ ವೈಶಿಷ್ಟ್ಯಪೂರ್ಣ ಘೋಷಣೆಯಂತೆ, ಧರ್ಮಜ್ಯೋತಿಯನ್ನು ಹೊತ್ತು ಜನರ ಮನೆ ಮನೆಗೆ, ಮನಮನಕ್ಕೆ ಮುಟ್ಟಿಸುವ ಉಜ್ವಲ ಕಾರ್ಯವನ್ನು ಕೈಗೊಂಡಿದ್ದೀರಿ.

**ಪೂಜ್ಯ ಶ್ರೀ ಸದ್ಗುರುಗಳೇ:—** ರಾಷ್ಟ್ರಾದ್ಯಂತ ಅವಿಶ್ರಾಂತರಾಗಿ ಸಂಚರಿಸುತ್ತಾ ಆಧ್ಯಾತ್ಮಿಕ ಮತ್ತು ರಾಷ್ಟ್ರಧರ್ಮ ಪ್ರಜ್ಞೆಯನ್ನು ಜನತೆಯ ಹೃದಯದಲ್ಲಿ ಜಾಗೃತಿಸಿ, ಪವಿತ್ರ ಜ್ಞಾನಗಂಗೆಯನ್ನು ಅನಂತ-ಹೃದಯಿಗಳಿಗೆ ಹರಿಸುವ ಮಹಾಮಣಿಹ ಹೊತ್ತ ತಾವು ಕಾರ್ಯಬಾಹುಳ್ಯದ ನಡುವೆ ಬಿಡುವು ಮಾಡಿಕೊಂಡು ಆಗಮಿಸಿ, ಭೌತಿಕ ಜಲವು ಹರಿದ ನಾಡು ಸಂಪದ್ಭರಿತವಾಗಿ ಹಸಿರುಡುಗೆಯಿಂದ ಕಂಗೊಳಿಸುವಂತೆ, ಜ್ಞಾನ ಜಲವು ಹರಿದ ತಾಣ ಸಾತ್ವಿಕ ದೈವೀ ಸಂಪತ್ತಿನಿಂದ ಶೋಭಿಸುವದೆಂಬ ತತ್ವವನ್ನು ತಾವು ನಮಗೆ ಮನವರಿಕೆ ಮಾಡಿಕೊಟ್ಟಿದ್ದೀರಿ. ಈ ಅರಸೀಕೆರೆ ನಗರದಲ್ಲಿ ದಿನಾಂಕ ೮–೧೧–೭೭ ರಿಂದ ೧೫–೧೨–೭೭ ರವರೆಗೆ ಅಖಂಡವಾಗಿ, ಅವ್ಯಾಹತವಾಗಿ, ನಿರ್ವಿಘ್ನವಾಗಿ ಪ್ರವಚನವಾಹಿನಿಯನ್ನು ಹರಿಸಿ, ಅಸಂಖ್ಯಾತ ಚೇತನಗಳ ಹೃದಯಕ್ಕೆ ಅಮೃತ ಸೇಚನೆ ಮಾಡಿದ್ದೀರಿ.

ಅರಸೀಕೆರೆ ಇತಿಹಾಸದಲ್ಲೇ ಹಿಂದೆ ಕಂಡರಿಯದ, ಕೇಳಿ ಅರಿಯದಷ್ಟು ಅಸಂಖ್ಯಾತ ಶ್ರೋತೃಗಳನ್ನೂ, ಭಾವುಕ ಭಕ್ತರನ್ನೂ, ಬೌದ್ಧಿಕ-ಪಂಡಿತರನ್ನೂ, ಅಬಾಲ-ವೃದ್ಧ



ರಾದಿಯಾಗಿ ತಿಂಗಳುಗಟ್ಟಲೆ ಕೇಂದ್ರೀಕರಿಸಿ ಎರಡನೆಯ "ಕೈಲಾಸವನ್ನು" ಸೃಷ್ಟಿಸಿ, ಜನರು ಪ್ರಶಾಂತಚಿತ್ತರಾಗಿ ಧರ್ಮಬೋಧೆ ಕೇಳುವ ಮಂಗಳಮಯ ಭೂಮದೃಶ್ಯವನ್ನು ಸೃಷ್ಟಿಸಿ ನಮ್ಮನ್ನು ಧನ್ಯರಾಗಿ ಮಾಡಿದ್ದೀರಿ.

**ಕ್ರಾಂತಿ ಯೋಗಿಗಳೇ:—** ತಮ್ಮ ವಾಗ್ಝರಿ ಅಪೂರ್ವವಾದುದು. ಸ್ಫುಟವಾಗಿ ಧೀರ-ಗಂಭೀರ, ತಾರ್ತಿಕವಾಗಿ ಹೊರಹೊಮ್ಮುವ ತಮ್ಮ "ವೀರವಾಣಿ" ಶ್ರೀ ವಿವೇಕಾನಂದರ ವ್ಯಕ್ತಿತ್ವವನ್ನು ನೆನಪಿಗೆ ತರುವುದು. ಅದೇ ಕೆಚ್ಚು, ದೇಶಾಭಿಮಾನ, ರೂಪದ ಪಡಿಯಚ್ಚಾದ ತಾವು ಅಭಿನವ ವಿವೇಕಾನಂದರೆಂದರೆ ಅತಿಶಯೋಕ್ತಿಯಲ್ಲ.

**ಮಹಿಳಾ ಜಗದ್ಗುರು ಪೀಠ ಸಂಸ್ಥಾಪಕರೇ:–** ಕ್ರಾಂತಿ ಪುರುಷ, ಸಮಾಜ ಸುಧಾರಕ, ಜಗದ್ಗುರು ಬಸವಣ್ಣನವರು ೧೨ನೇ ಶತಮಾನದಲ್ಲೇ ಮಹಿಳಾಕುಲಕ್ಕೆ ಮಾನ್ಯತೆ ಸಮತೆಯನ್ನು ನೀಡಿದ್ದರೂ, ಕಾಲಾನಂತರದಲ್ಲಿ ಅವರಿಗೆ ಭಕ್ತತ್ವದ ಹಕ್ಕು ಮಾತ್ರವೇ ಇದ್ದು ಗುರುಸ್ಥಾನ ದೊರೆತಿರಲಿಲ್ಲ. ಇಂತಹ ಸಂಕೀರ್ಣ ಪರಿಸ್ಥಿತಿಯಲ್ಲಿ ಆದಿಶರಣರ ಕ್ರಾಂತಿ ಬೆಂಬಳಿ ಹಿಡಿದು ಗುರುತ್ವ ಬರುವುದು ಅರ್ಹತೆಯಿಂದಲೇ ವಿನಾ ಆಕಾರಗಳಿಂದಲ್ಲ ಎಂಬುದನ್ನು ಘಂಟಾಘೋಷವಾಗಿ ಸಾರಿ ಜಗನ್ಮಾತಾ ಅಕ್ಕಮಹಾದೇವಿ ಅನುಭಾವ ಪೀಠವನ್ನು ಸ್ಥಾಪಿಸಿ, ಕನ್ನಡ ನಾಡಿನ ಕೀರ್ತಿ ಅಮರವಾಗುವಂತೆ ಮಾಡಿದ ಪುಣ್ಯಪುರುಷರು ತಾವು. ಪರಿಣಾಮವಾಗಿ ಪೂಜ್ಯ ಶ್ರೀ ಮಾತೆಮಹಾದೇವಿಯರಂತಹ ಉಜ್ವಲ ವ್ಯಕ್ತಿಯನ್ನು ಮೊಟ್ಟಮೊದಲ ಮಹಿಳಾ ಜಗದ್ಗುರುವಾಗಿ ನೀಡಿದ್ದೀರಿ. ಜ್ಞಾನ, ಭಕ್ತಿ, ವಿರಕ್ತಿಗಳ ದಿವ್ಯ ಸಂಗಮವಾದ, ತತ್ವಜ್ಞಾನ ಸಾಹಿತ್ಯದ ಸ್ವರಮೇಳವಾದ ಪೂಜ್ಯಮಾತೆಯವರನ್ನು ಲೋಕಕ್ಕೆ ನೀಡಿದ ಪುರುಷ ಹಸ್ತಕ್ಕೆ ನಮೋ ನಮಃ

**ಸಮಾಜ ಸುಧಾರಕರೇ:—** ಸಮಾಜದಲ್ಲಿಂದು ಧಾರ್ಮಿಕ ಭಾವನೆ ಕ್ಷಯವಾಗುತ್ತಲಿದ್ದು ನಾಸ್ತಿಕ ಪ್ರವೃತ್ತಿ ಪುಟಿದೇಳುವುದರ ಜೊತೆಗೆ ಜಾತೀಯತೆಯ ಪಿಡುಗು ಪಸರಿಸುತ್ತಲಿದೆ. ಜೀವನದ ವಿವಿಧ ರಂಗಗಳಲ್ಲಿ ಅಸತ್ಯ, ಅನೀತಿ, ಅಸಮತೆಗಳು ತಾಂಡವವಾಡುತ್ತಿವೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಮೂಢ ವಿಚಾರದ ಕಾರ್ಗತ್ತಲೆಯಿಂದ ಜನರನ್ನು ಹೊರತಂದು ಅವರಿಗೆ ವಿಮರ್ಶಾ ಪ್ರಜ್ಞೆಯ ಬೆಳಕಿತ್ತು, ಸ್ವತಂತ್ರ ವಿಚಾರದ ಗಾಳಿಯನ್ನು ಪಾನಮಾಡಿಸಿ ಹೊಸಬೆಳಕನ್ನು ನೀಡಿದ್ದೀರಿ. "ಜಾತಿಗಳು ಮಾನವರ ಕಲ್ಪನೆ, ಮಾನವ ಜನಾಂಗದಲ್ಲಿ ಮೇಲು–ಕೀಳು ಎನ್ನುವುದು ಸಲ್ಲದು. ಎಲ್ಲರೂ ದೇವರ ಮಕ್ಕಳು, ಸಮಾನರು, ಮುಕ್ತಿಗೆ ಅರ್ಹರು" ಎಂಬ ದಿವ್ಯ ಸಂದೇಶ ನೀಡಿ ವಿಚಾರ ಕ್ರಾಂತಿಯ ಮೂಲಕ ಸಮಾಜವನ್ನು ಸುಧಾರಿಸುತ್ತಲಿದ್ದೀರಿ.

ಇಂತಹ ಪುಣ್ಯ ಪುರುಷರಾದ ತಮಗೆ ಕೃತಜ್ಞತೆ ಅರ್ಪಿಸುವುದು ಸುಲಭ ಸಾಧ್ಯವಲ್ಲ. ಆದರೂ ನಮ್ಮ ಉತ್ಸಾಹಕ್ಕೆ ಮತ್ತು ಕರ್ತವ್ಯಗಳಿಗೆ ರೂಪು ಕೊಡಲು

ಧನ್ಯವಾದವನ್ನು ಅರ್ಪಿಸುತ್ತಿದ್ದೇವೆ. ಅರಸೀಕೆರೆ ನಗರವು ವಿದ್ಯೆ, ವ್ಯವಸಾಯ ಮತ್ತು ವ್ಯಾಪಾರಿಗಳ ತ್ರಿವೇಣಿ ಸಂಗಮವಾಗಿದೆ. ಇಂತಹ ನಗರದ ಜನತೆಯ ಸೇವೆಯನ್ನೇ ನಮ್ಮ ಉದಾತ್ತ ಧ್ಯೇಯವಾಗಿರಿಸಿಕೊಂಡು, ಉತ್ಸಾಹ ಪೂರ್ಣರಾಗಿ ಸಾರ್ವಜನಿಕ, ಹಿತರಕ್ಷಣೆ ಸೌಲಭ್ಯ–ಆರೋಗ್ಯಗಳಿಗಾಗಿ ಹೃತ್ಪೂರ್ವಕವಾಗಿ ಶ್ರಮಿಸುತ್ತಲಿದ್ದೇವೆ.

ದೈವೀಶಕ್ತಿಯ ಸಾಕಾರವಾಗಿ, ಸಮತಾವಾದದ ಪ್ರತಿನಿಧಿಯಾಗಿ, ವಚನಕಾರರ ಕ್ರಾಂತಿಕಾರಿ ಸಂದೇಶಗಳನ್ನು ಎಲ್ಲೆಡೆಗೆ ಮುಟ್ಟಿಸುವ ಸುಗಂಧ ಮಾರುತವಾಗಿ, ವಿಶ್ವಧರ್ಮ ಜ್ಯೋತಿಯನ್ನು ಜನತೆಯ ಹೃದಯ ಪ್ರಣತೆಗೆ ಸ್ಪರ್ಶಿಸುವ ನಾಡ ನಂದಾ ದೀಪವಾಗಿ ಕಂಗೊಳಿಸುತ್ತಿರುವ ತಮ್ಮ ಶುಭಹರಕೆ ನಮಗೆ ಆತ್ಮ ವಿಶ್ವಾಸವನ್ನೂ, ಸೇವೆ ಮಾಡುವ ಸಾಮರ್ಥ್ಯವನ್ನೂ ನೀಡಲೆಂದು ಕೇಳಿಕೊಳ್ಳುತ್ತಾ, ತಾವು ಹೊತ್ತ ಮಹಾಮಣಿಹವನ್ನು ಪೂರೈಸುವುದಕ್ಕೆ ಅವಶ್ಯವಾದ ಆಯುರಾರೋಗ್ಯ ಭಾಗ್ಯಗಳನ್ನು ಪರಮಾತ್ಮನು ಕರುಣಿಸಲೆಂದು ಆ ದಯಾಮಯನಲ್ಲಿ ಪ್ರಾರ್ಥಿಸುತ್ತಾ, ಜನತಾ ಪ್ರತಿನಿಧಿಗಳಾದ ನಾವು ಕೃತಜ್ಞತಾಪೂರ್ವಕವಾಗಿ ತಮಗೆ ಈ ನಮ್ಮ ಬಿನ್ನವತ್ತಳೆ ಅರ್ಪಿಸುತ್ತಲಿದ್ದೇವೆ.

ಇತಿ,

ದಿನಾಂಕ: ೧೫–೧೨–೭೭
ಸ್ಥಳ: ಅರಸೀಕೆರೆ

**ಪುರಸಭೆಯ ಅಧ್ಯಕ್ಷರು ಮತ್ತು ಸದಸ್ಯರು,**
**ಅರಸೀಕೆರೆ.**

---

(೬೫ನೇ ಪುಟದಿಂದ)

ಮೂಲ ಚೈತನ್ಯವನ್ನು ಅರಸುವ ಚಿಂತನಾಪರ ಭಾವ ವ್ಯಕ್ತವಾಗಿದೆ. ಚಿಂತನೆಯನ್ನು ನಡೆಸಿದ ಮಹದೇವಿಯಕ್ಕ ಅದರ ಮೂಲವೆಲ್ಲ ಒಂದೆ ಎಂಬ ನಿಲುವಿಗೆ ಬರುತ್ತಾಳೆ. ಹಲವು ಜಗಂಗಳ ಕೂಡಿಕೊಂಡಿರ್ದರೇನು ತನ್ನ ಪರಿ ಬೇರೆ ಎಂಬ ನಿಲುವಿಗೆ ಬರುತ್ತಾಳೆ. ಹಾಗೆಯೇ ಸಚ್ಚಿದಾನಂದನ ಇರವನ್ನು ಕಂಡುಕೊಂಡ ಮಾತೆಯವರ 'ಅಂದದ ಸಚ್ಚಿದಾನಂದಗೊಲಿದ ನಾನೆ ಕಡುಧನ್ಯೆ' ಎಂಬ ಭಾವ ಅಕ್ಕನ ಅನುಭಾವಕ್ಕೆ ಸಂವಾದಿಯಾಗಿದೆ, ಸಮಾನವಾಗಿದೆ.

ವಚನಕಾರರ ಹಾದಿಯಲ್ಲಿ ಹೋಗುತ್ತಿದ್ದು ಅವರ ಪ್ರಭಾವಕ್ಕೆ ಒಳಗಾಗಿರುವ ಮಾತೆಯವರು ವಚನಕಾರರಂತೆ ಅನುಭಾವಿಗಳಾಗಿ, ವಚನಕಾರರಾಗಿ, ಮಹಾದೇವಿಯಕ್ಕನಂತೆ ಉತ್ತಮ ಕವಯಿತ್ರಿಯರು ಕೂಡ ಆಗಿದ್ದಾರೆ. ಇದು ಮಾತೆಯವರ ಪ್ರಾತಿನಿಧಿಕ ಭಾವಗೀತವಾಗಿದೆ.

ನಿಜವಾದ ಒಂದು ಭಾವಗೀತೆ ತನ್ನ ಭಾವ ತೀವ್ರತೆಯಿಂದ ಓದುಗನ ಮನಸ್ಸಿನಲ್ಲಿ ಅನುರಣಿಸುತ್ತಿರುತ್ತದೆ. ಈ ಭಾವಗೀತೆಯಾದರೂ ಹಾಗೆಯೆ. A Good song read in silence still sings and dances in the readers brain. ಮೌನವಾಗಿ ಉತ್ತಮ ಭಾವಗೀತೆಯನ್ನು ಓದಿಕೊಂಡಾಗ ಅದು ತನ್ನ ನಾದದ ಬಲದಿಂದ ಹಾಡುತ್ತದೆ ಮತ್ತು ಕುಣಿಯುದ ಗುಣದಿಂದ ಓದುಗನ ಮನಸ್ಸಿನಲ್ಲಿ ಕುಣಿಯುತ್ತದೆ. ಈ ಅನುಭವ ಈ ಭಾವಗೀತೆಯನ್ನು ಓದಿಕೊಂಡಾಗ ವನಗಂತೂ ಆಯಿತು.

★ (ಚಿಂತನಾ ಕೃಪೆಯಿಂದ)



## ಸಾದರ ಸ್ವೀಕಾರ

೧. **ಜಾತಿಧರ್ಮದ ಮಹತ್ವ** ; ಲೇ ಮತ್ತು ಪ್ರ: ಕೋಟ ವಾಸುದೇವ ಕಾರಂತ. ಕ್ರೌನ್ $\frac{1}{8}$, ಪುಟ. 152, 1977, ಬೆಲೆ : 1–60

೨. **ಧ್ಯಾನ ಮಾಡಬೇಕು** ; ಲೇ ಮತ್ತು ಪ್ರ: ಕೋಟ ವಾಸುದೇವ ಕಾರಂತ, ನೆಹರು ಅವಿನ್ಯೂ ಕ್ರಾಸ್ ರೋಡ್, ಮಂಗಳೂರು-3 ಕ್ರೌನ್ $\frac{1}{8}$, ಪುಟ : 368, 1975, ಬೆಲೆ : 4–50.

೩. **ನಿರುಪಮ ಜ್ಞಾನೈಕ ನಿಧಿ, ಮಡಿವಾಳ ಮಾಚಿತಂದೆ.** ಲೇ— ಪಂಡಿತ್, ಬಿ. ನಂಜುಂಡಯ್ಯ, ಕರ್ನಾಟಕ ಸಾಹಿತ್ಯ ವಿಶಾರದ ತಿಪಟೂರು, ಜಿಲ್ಲೆ ತುಮಕೂರು. ಪುಟ 199, $\frac{1}{8}$ ಕ್ರೌನ್, ಬೆಲೆ: 4-50 ರೂಪಾಯಿಗಳು.

೪. **ಬಸವ ಭಕ್ತಿಸಾರ ಮತ್ತು ಬಸವ ಕೀರ್ತನೆಗಳು** ; (ಭಾಮಿನಿ ಷಟ್ಪದಿ) ಲೇ : ಪಂಡಿತ್, ಬಿ. ನಂಜುಂಡಯ್ಯ, ಕರ್ನಾಟಕ ಸಾಹಿತ್ಯ ವಿಶಾರದ ಗೌ॥ ಹೈಸ್ಕೂಲ್ ತಿಪಟೂರು, ಜಿಲ್ಲೆ ತುಮಕೂರು. ಪುಟ 112, $\frac{1}{8}$ ಕ್ರೌನ್, ಬೆಲೆ. 0–60 ಪೈಸೆ.

೫. **ಶ್ರೀ ಶಬರಿ ದೇವಿ ಮಹಾತ್ಮೆ**; (ಕವನ ಸಂಗ್ರಹ) ಲೇ–ಸಣ್ಣಬಾಳಪ್ಪ ಬಿ. ಹೊಸಮನಿ ಎಂ. ಎ. ಕನ್ನಡ ಅಧ್ಯಾಪಕರು ಸರ್ಕಾರಿ ಜೂನಿಯರ್ ಕಾಲೇಜು, ಹಿರಿಯೂರು. ಪುಟ 112 $\frac{1}{8}$ ಕ್ರೌನ್, ಬೆಲೆ, 5–00 ರೂಪಾಯಿಗಳು.

೬. **ಡೆಪ್ಯೂಟಿ ಚನ್ನಬಸಪ್ಪನವರು**; (ಜೀವನ ಚಿತ್ರಣ) ಲೇ : ಮ.ಗು. ಹಂದ್ರಾಳ. B.A (Hons) MED. ನಿವೃತ್ತ ಧಾರವಾಡ ವಿಭಾಗದ ವಿದ್ಯಾಧಿಕಾರಿಗಳು, ಪುಟ, 44 ಫುಲ್ ಸ್ಕೇಪ್. $\frac{1}{8}$ ಬೆಲೆ. 0–75 ಪೈಸೆ.

೭. **ಪುರಾತನರ ತ್ರಿವಿಧಿ** ; ಪ್ರಕಾಶಕರು (ಶ್ರೀ ಶಾರದಾ ಮಹಿಳಾ ಸೇವಾ, ಸಮಾಜ (ರಿ) ಮೈಸೂರು) ಫುಲ್ ಸ್ಕೇಪ್ $\frac{1}{8}$, ಉಚಿತ.

(ಸೂ. ಸಾದರ ಸ್ವೀಕಾರಕ್ಕೆ ಒಂದು ಪ್ರತಿ ; ವಿಮರ್ಶೆಗೆ ೨ ಪ್ರತಿ ಕಳಿಸಬೇಕು).

## ಕಲ್ಯಾಣ ಕಿರಣದ ಆಜೀವ ಸದಸ್ಯರು

ಶರಣರಾದ

೧. ಎಚ್. ಡಿ. ತಿಮ್ಮಪ್ಪ, ಉಪಾಧ್ಯಾಯರು, ಪ್ರೌಢಶಾಲೆ, ಅರಸೀಕೆರೆ.
೨. ಜಯಕುಮಾರ, ಚಂದ್ರಾ ಸ್ಟೋರ್ಸ್, ಅರಸೀಕೆರೆ.
೩. ರುದ್ರಯ್ಯ, ಪಿ. ಡಬ್ಲ್ಯು. ಡಿ. ಕಂಟ್ರಾಕ್ಟರ್, ರಾಯಚೂರು.
೪. ವೀರಯ್ಯ, ಜೂನಿಯರ್ ಇಂಜಿನಿಯರ್, ಲಿಂಗಸುಗೂರು.
೫. ಶಾಂತಪ್ಪ, ಜೂನಿಯರ್ ಇಂಜಿನಿಯರ್, ಲಿಂಗಸುಗೂರು.
೬. ಪಾಟೀಲ, ಎಫ್. ಡಿ. ಸಿ., ಆರ್. ಟಿ. ಓ. ಆಫೀಸು, ರಾಯಚೂರು.
೭. ತಿಪ್ಪೇಸ್ವಾಮಿ, ಫಾರೆಸ್ಟ್ ಕಂಟ್ರಾಕ್ಟರ್, ಶಿವಮೊಗ್ಗ.
೮. ಕೆ. ಎಸ್. ಸಿದ್ದಪ್ಪ, ಅಶೋಕ ರೋಡ್, ಶಿವಮೊಗ್ಗ.
೯. ಎಮ್. ಮಹಾಲಿಂಗಯ್ಯ, ಅಡ್ವೊಕೇಟ್, ಶಿವಮೊಗ್ಗ.
೧೦. ಎಸ್. ವಿ. ಚಂದ್ರಪ್ಪ, ಜನರಲ್ ಮರ್ಚೆಂಟ್, ಶಿವಮೊಗ್ಗ.
೧೧. ಶರಣೆ ಜಯಮ್ಮ, ಜಿ. ಸಿದ್ರಾಮಪ್ಪ, ಶಿವಮೊಗ್ಗ.
೧೨. ,, ಗೌರಮ್ಮ, ಈಶ್ವರನ್ ಆಶ್ರಮ, ಚಿಕ್ಕನಾಯಕನಹಳ್ಳಿ.
೧೩. ,, ಎಮ್. ಎಲ್. ಲಲಿತಮ್ಮ, ಶಿವಮೊಗ್ಗ.
೧೪. ,, ಲಕ್ಷ್ಮಮ್ಮ ವೆಂಕಟರಾಮಶಾಸ್ತ್ರಿ, ಶಿವಮೊಗ್ಗ.
೧೫. ,, ಭವಾನಮ್ಮ ದತ್ತಾತ್ರೇಯಶಾಸ್ತ್ರಿ, ಶಿವಮೊಗ್ಗ.

★★★★

## ಕಾರ್ಯಕ್ರಮಗಳ ವಿವರ

ಪರಮ ಪೂಜ್ಯರಾದ ಸದ್ಗುರು ಶ್ರೀ ಲಿಂಗಾನಂದ ಸ್ವಾಮಿಗಳವರು ೨೬-೧೨-೭೭ ರಿಂದ ತುಮಕೂರು ಜಿಲ್ಲೆಯ ಚಿಕ್ಕನಾಯಕನ ಹಳ್ಳಿಯಲ್ಲಿ ಪ್ರವಚನ ನಡೆಸುತ್ತಿದ್ದು, ೨೦-೧-೭೮ ರಂದು ಮಂಗಲಗೊಳಿಸಿದರು. ದಿನಾಂಕ ೨೨ರಿಂದ 'ಹುಳಿಯಾರು' ಎಂಬ ಹಳ್ಳಿಯಲ್ಲಿ ವಿಶ್ವಧರ್ಮ ಪ್ರವಚನ ಮಾಡುತ್ತಲಿದ್ದಾರೆ.

****

ಪರಮ ಪೂಜ್ಯರಾದ ಜಗದ್ಗುರು ಮಾತೆ ಮಹಾದೇವಿ ಅವರು, ದಿನಾಂಕ ೨೩-೧೨-೭೭ ರಿಂದ ಅವ್ಯಾಹತವಾಗಿ ಶಿವಮೊಗ್ಗ ನಗರದಲ್ಲಿ ಪ್ರವಚನಾಮೃತ ನೀಡುತ್ತಿದ್ದಾರೆ. ಈ ಜ್ಞಾನದಾಸೋಹದಲ್ಲಿ ಅಸಂಖ್ಯಾತರು ಭಾಗವಹಿಸುತ್ತಿದ್ದಾರೆ.

****

ಬೆಂಗಳೂರಿನ ಬಸವ ಮಂಟಪದಲ್ಲಿ, ದಿನಾಂಕ ೧೪-೧-೭೮ರಂದು **'ಸಿದ್ಧರಾಮ ಜಯಂತಿ'** ಆಚರಿಸಲಾಯ್ತು. ಮುಖ್ಯ ಅತಿಥಿಗಳಾಗಿ ಡಾ|| ಪಿ. ವಿ. ನಾರಾಯಣ ರವರು, ಅಧ್ಯಕ್ಷರಾಗಿ ಡಾ|| ರಂ. ಶ್ರೀ. ಮುಗಳಿಯವರು ಆಗಮಿಸಿದ್ದರು.

ವರದಿ : **ಶಿವರಾಯ ಚಂದ್ರಕಂಠಿ.**



## ವಿಶ್ವಕಲ್ಯಾಣ ಮಿಷನ್ನಿನ

### ಸುಯಿಧಾನ ಸುಗ್ರಂಥ ಮಾಲೆಯ ಲಭ್ಯವಿರುವ ಗ್ರಂಥಗಳು

| | | | ರೂ. ಪೈ. |
|---|---|---|---|
| ೧. | ದೇವಪೂಜಾ ವಿಧಾನ | ಸ್ವಾಮಿ ಲಿಂಗಾನಂದ | ೨-೫೦ |
| ೨. | ವಿರಹ ತರಂಗ | ಮಾತೆ ಮಹಾದೇವಿ | ೩-೦೦ |
| ೩. | ಬಸವ ತತ್ತ್ವ ದರ್ಶನ | ,, | ೧೪-೦೦ |
| ೪. | ಚಿನ್ಮೂಲಾದ್ರಿಯ ಚಿತ್ಕಳೆ | ಸ್ವಾಮಿ ಲಿಂಗಾನಂದ | ೬-೦೦ |
| ೫. | ಸಾಮೂಹಿಕ ಪ್ರಾರ್ಥನೆ | ಸಂ : ಮಾತೆ ಮಹಾದೇವಿ | ೦-೫೦ |
| ೬. | ಹಿಂದೂ ಯಾರು ? | ,, | ೦-೫೦ |
| ೭. | ಬಸವ ವಚನ ಸುಧಾ | ಸಂ : ಮಾತೆ ಮಹಾದೇವಿ | ೨-೦೦ |
| ೮. | ವಚನಾಮೃತ | ಸ್ವಾಮಿ ಲಿಂಗಾನಂದ | ೨-೦೦ |
| ೯. | ಕಲ್ಯಾಣ ಕ್ರಾಂತಿ | ಮಾತೆ ಮಹಾದೇವಿ | ೩-೫೦ |
| ೧೦. | ದೇವರ ಮಕ್ಕಳು | ,, | ೨-೫೦ |
| ೧೧. | ಪತಿತೋದ್ಧಾರಕ | ,, | ೧-೫೦ |
| ೧೨. | ಲಿಂಗಾಯತ ಧರ್ಮ ಕೈಪಿಡಿ | ,, | ೨-೫೦ |
| ೧೩. | ಲಿಂಗಾಯತ ಧರ್ಮ ಸಂಸ್ಥಾಪಕರಾರು ? | ಬಿ. ಸಿ. ಜವಳಿ | ೪-೦೦ |
| ೧೪. | ಬಸವಣ್ಣನವರ ವಚನ ಪದ ಪ್ರಯೋಗ ಕೋಶ | ಎಸ್. ಆರ್. ಗುಂಜಾಳ | ೫೦-೦೦ |
| ೧೫. | ದೇವನೆಡೆಗೆ | ಮಾತೆ ಮಹಾದೇವಿ | ೧-೦೦ |
| ೧೬. | ಹೆಪ್ಪಿಟ್ಟ ಹಾಲು (ಸಾ. ಕಾದಂಬರಿ) | ,, | ೧೬-೦೦ |
| ೧೭. | ಅನುಭವ ಮಂಟಪ | ,, | ೧-೦೦ |
| ೧೮ | Revolution in Kalyana | Mate Mahadevi | ೫-೦೦ |
| ೧೯ | A Guide to Lingayatism | ,, | ೬-೦೦ |
| ೨೦. | Emblem of God | Swami Linganada | ೬-೦೦ |
| ೨೧. | ಅಧ್ಯಾತ್ಮ ಮತ್ತು ಮಹಿಳೆ | ಮಾತೆ ಮಹಾದೇವಿ | ೧-೦೦ |
| ೨೨. | ತರಂಗಿಣಿ (ಅಕ್ಕಮಹಾದೇವಿಯ ಕಾದಂಬರಿ) | ,, | ೩೩-೦೦ |
| ೨೩. | ವಿಶ್ವ ವಿಭೂತಿ ಬಸವಣ್ಣ | ,, | ೪-೦೦ |
| ೨೪. | Lingaytism | ,, | ೩-೦೦ |
| ೨೫. | ವಿಶ್ವ ಕಲ್ಯಾಣ ಗೀತೆ | ಸಂ : ,, | ೩-೦೦ |
| ೨೬. | ಮಾತೃ ಹರಕೆ | ,, | ೩-೦೦ |
| ೨೭. | Mataji A Profile | | ೦-೫೦ |
| ೨೮. | ವಿಶ್ವಕಲ್ಯಾಣ ಮಿರ್ಷ, ಸಿಂಹಾವಲೋಕನ ಮತ್ತು ಪಕ್ಷಿನೋಟ | ಶಿ. ಚಂದ್ರಕಂಠಿ | ೦-೫೦ |
| | ಬಸವಣ್ಣ, ಅಕ್ಕಮಹಾದೇವಿ, ಗುರೂಜಿ, ಮಾತಾಜಿಯವರ ಭಾವಚಿತ್ರಗಳು ಪ್ರತಿಯೊಂದಕ್ಕೆ | | ೧-೫೦ |
| | ಲಿಂಗಾಯತ ಯಾರು ? (೦-೨೫) ವಿಶ್ವ ವಿಭೂತಿ ಬಸವಣ್ಣ (ಚಾರ್ಟ್) | | ೦-೫೦ |



ಲೋಕ ಖ್ಯಾತ ಬ್ರಿಟಿಷ್ ವಸ್ತು ಸಂಗ್ರಹಾಲಯ, ಲಂಡನ್

*Correspond to :*

**BASAVA MANTAPA**

No. 24, Chord Road, II Block, Rajajinagar

Bangalore-560010